# ಮಾನುಷಿ

ತಿಂಗಳ ಪತ್ರಿಕೆ

- ವೇಶ್ಯಾವೃತ್ತಿಗೆ ಸಂಪ್ರದಾಯದ ಪರವಾನಗಿ
- ಸಾತಿನ್ನರ ಹೋರಾಟ
- ಶಹನಾಜಳ ಕತೆ
- ಪತಿ - ಸಿಗದ ನ್ಯಾಯ

ಜನವರಿ : 1997

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 11 ಸಂಚಿಕೆ : 12

ಜನವರಿ : 1997





ವಿಳಾಸ :

"ಮಾನಸ" ತಿಂಗಳ ಪತ್ರಿಕೆ

ಪಂಚಾಯಿತಿ ರಸ್ತೆ

ಕಾಡುಗೋಡಿ ಪೋಸ್ಟ್

ಬೆಂಗಳೂರು - 560 067

ಸೂಚನೆ : ಬಿಡಿ ಪ್ರತಿ 3-00 ರೂ.

ವಾರ್ಷಿಕ ಚಂದಾ 40-00 ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ

ಒಟ್ಟು ಹನ್ನೊಂದು ಸಂಚಿಕೆಗಳು


**ಈ ಸಂಚಿಕೆಯಲ್ಲಿ....**


ವೇಶ್ಯಾವೃತ್ತಿಗೆ ಸಂಪ್ರದಾಯದ ಪರವಾನಗಿ!

- ವೆಂ. ವನಜ

ನವೆಂಬರ್ ೨೩ರಂದು ಮಂಗಳೂರಿನಲ್ಲಿ ನಡೆದ ನಾಲ್ಕನೇ ಲೇಖಕಿಯರ ಸಮ್ಮೇಳನ

ಪಾಕಿಸ್ತಾನದಲ್ಲಿ ವಿವಾಹ ಕಾಯಿದೆ ವಿರುದ್ಧ ಮಹಿಳೆಯರ ಪ್ರತಿಭಟನೆ

ಶಹನಾಜಳ ಕತೆ

- ಡಾ. ಎಸ್. ವಿ. ಪ್ರಭಾವತಿ

ವಿಚ್ಛೇದನ - ಒಂದು ಚರಿತ್ರಾರ್ಹ ತೀರ್ಪು

ಸತಿ - ಸಿಗದ ನ್ಯಾಯ

ಸಮಾನ ನಾಗರಿಕ ಸಂಹಿತೆ ಮತ್ತು ಕೇಂದ್ರ ಸರ್ಕಾರ

ಸಂವೇದನೆ - ಭಯ

- ಸರಸ್ವತಿ ದು.

ಸಾತಿನ್ - ಮಹಿಳಾ ಸಶಕ್ತತೆ

ಸರ್ಕಾರಕ್ಕೆ ನಮ್ಮ ಪ್ರಯತ್ನವನ್ನು ನಿಲ್ಲಿಸಲು ಸಾಧ್ಯವಿಲ್ಲ!





ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ

ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭

# ಸಂಪಾದಕೀಯ



ಆರ್ಥಿಕ ಉದಾರೀಕರಣವು ದೇಶದಲ್ಲಿ 'ನ್ಯಾಯಾಂಗ ಕ್ರಿಯಾಶೀಲತೆ' ಎಂಬ ಹೊಸ ಜೀವಿಯೊಂದನ್ನು ಹುಟ್ಟು ಹಾಕಿರುವಂತೆ ಕಾಣುತ್ತದೆ. ಇತ್ತೀಚೆಗೆ ಹೊರ ಬಂದಿರುವ ನ್ಯಾಯಾಲಯದ ತೀರ್ಪುಗಳು, ಹತೋಟಿ ಮೀರಿದ ಭ್ರಷ್ಟಾಚಾರವು ವ್ಯವಸ್ಥೆಯನ್ನು ಆಳುತ್ತಿದೆ ಎಂಬುದನ್ನು ಸಾಬೀತು ಪಡಿಸಿದೆ. ಇದು ಜನರಿಗೆ ತಿಳಿದಿದ್ದ ವಿಚಾರವೇ. ಭೋಫೋರ್ಸ್ ಹಗರಣದಲ್ಲಿ ಶಾಮೀಲಾಗಿರುವ ಹೆಸರುಗಳ ಪಟ್ಟಿಯು ಹೊರಬಂದಿದೆ. (ಆಶ್ಚರ್ಯದ ವಿಷಯವೇನಲ್ಲ), ಮಾಜಿ ಪ್ರಧಾನಮಂತ್ರಿಗಳು ಆಪಾದನೆಯ ಕೆಸರಿನಿಂದ ಮುಚ್ಚಿ ಹೋಗಿದ್ದಾರೆ. ಬಿಹಾರಿನ ಮುಖ್ಯಮಂತ್ರಿಗಳಂತೂ ಮೇವು ಮೇಯುವುದರಲ್ಲಿ ದನಗಳನ್ನೂ ಮೀರಿಸಿದ್ದಾರೆ. ನಿಜವಾಗಿಯೂ ಈ ನ್ಯಾಯಾಂಗ ಕ್ರಿಯಾಶೀಲತೆಯು ಎಲ್ಲ ಸಮಸ್ಯೆಗಳನ್ನು ಸರಿಪಡಿಸಬಲ್ಲದೆ? ಈ ದೇಶದ ಬಡವರ, ದಲಿತರ, ಮಹಿಳೆಯರ ದನಿಯಾಗಬಲ್ಲದೆ?

'ನ್ಯಾಯಾಂಗ ಕ್ರಿಯಾಶೀಲತೆ' ಎಂಬ ಪವಾಡದಿಂದ ನಾವು ಮೋಸಹೋಗುವುದು ಬೇಡ. ಗಣ್ಯರಿಗೆ (elite) ಹಾಗು ರಾಜ್ಯಾಂಗಕ್ಕೆ ಆಧುನಿಕ ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಯನ್ನು ಹುಟ್ಟು ಹಾಕುವುದೇ ಮೊಟ್ಟ ಮೊದಲ ಆದ್ಯತೆ. ರಾಜ್ಯಾಂಗವು, ಯಾವುದೇ ರಕ್ಷಣೆಯಿಲ್ಲದೆ, ಪರಿಹಾರವಿಲ್ಲದೆ ದುಡಿಯುವ ಬಡವರ, ಮಹಿಳೆಯರ, ತುಳಿತಕ್ಕೊಳಗಾದವರ ದುಡಿಮೆಯ ಆಧಾರದ ಮೇಲೆ ಮುಕ್ತ ಮಾರುಕಟ್ಟೆ ವ್ಯವಸ್ಥೆಯನ್ನು ಕಟ್ಟಲು ಸಕ್ರಿಯಗೊಂಡಿದೆ. ರಾಜ್ಯಾಂಗದ ಹೊಸ ಆರ್ಥಿಕ ನೀತಿಯಿಂದಾಗಿ ಬಡವರು ಮಹಿಳೆಯರು ಇನ್ನಷ್ಟು ದರಿದ್ರ ಸ್ಥಿತಿಗೆ ತಳ್ಳಲ್ಪಡುತ್ತಿದ್ದಾರೆ. ಈಗಿರುವ ಭ್ರಷ್ಟಾಚಾರ ಹಾಗು ಆಡಳಿತ ಕ್ರಮಗಳು ಮುಕ್ತ ಮಾರುಕಟ್ಟೆಯ ಸಮರ್ಥ, ಸುಗಮ ಕಾರ್ಯಾಚರಣೆಗೆ ಕೇಡುಗಳಾಗಿ ಪರಿಣಮಿಸಿರುವುದರಿಂದ, ಆ 'ಕೇಡು'ಗಳನ್ನು ತಡೆಯಲೇಬೇಕಾಗಿರುವ ಒತ್ತಡಕ್ಕೆ ರಾಜ್ಯಾಂಗವು ಒಳಗಾಗಿದೆ. ಇದರರ್ಥ ಬಡವರಿಗೆ ಅಥವಾ ಮಹಿಳೆಯರಿಗೆ ಒಳಿತಾಗುವುದೆಂದ್ಲೇ?

ಇತ್ತೀಚೆಗೆ ಬಂದ ಮಹಿಳಾ ವಿರೋಧಿ ತೀರ್ಪುಗಳೇ ನ್ಯಾಯಾಂಗ ಕ್ರಿಯಾಶೀಲತೆ ಎನ್ನುವುದು ಸೀಮಿತ ಚಟುವಟಿಕೆಯೆಂಬುದನ್ನು ಸಾಬೀತುಪಡಿಸುತ್ತದೆ. ರೂಪ್‌ಕನ್ವರ್‌ಳ ಸತಿ ಪ್ರಕರಣದ ಆರೋಪಿಗಳನ್ನು ಖುಲಾಸೆ ಮಾಡಿರುವುದು ಹೇಗೆ ಮಹಿಳಾ ಹಿತಾಸಕ್ತಿಗಳು ಪ್ರಬಲ ಪುರುಷ ಕೋಮಿಗೆ ಅಧೀನಗೊಳಿಸಲ್ಪಟ್ಟಿವೆ ಎಂಬುದನ್ನು ತೋರಿಸಿಕೊಟ್ಟಿದೆ. ರಾಜಾಸ್ಥಾನದ ಭವರಿಬಾಯಿಯು ನ್ಯಾಯಕ್ಕಾಗಿ ಇನ್ನೂ ನ್ಯಾಯಾಲಯದ ಬಾಗಿಲು ಬಡಿಯುತ್ತಿದ್ದಾಳೆ. ಅವಳ ಮೇಲೆ ಅತ್ಯಾಚಾರವೆಸಗಿದ ಆರೋಪಿಗಳು ಸನ್ಮಾನಿತರಾದುದು ಎಲ್ಲರಿಗೆ ತಿಳಿದ ವಿಷಯ. ಮದ್ಯ ವಿತರಿಸಬಾರದು, ಅಶ್ಲೀಲ ಅಂಗ ಪ್ರದರ್ಶನವಿರಬಾರದೆಂಬ 'ಉಗ್ರ' ಎಚ್ಚರಿಕೆ ನೀಡಿ ವಿಶ್ವ ಸುಂದರಿ ಸ್ಪರ್ಧೆಯನ್ನು ನಡೆಸಲು ಅನುವು ಮಾಡಿಕೊಟ್ಟು ರಾಜ್ಯ ಉಚ್ಚ ನ್ಯಾಯಾಲಯವು - ಮಹಿಳೆಯರನ್ನು ಸರಕಾಗಿಸುವುದರ ವಿರುದ್ಧ ನಡೆದ ಹೋರಾಟವನ್ನು ಹಾಸ್ಯಾಸ್ಪದ ಮಾಡಿತು. ಹಾಸನದ ಅತ್ಯಾಚಾರ ಪ್ರಕರಣಕ್ಕೆ ಸಂಬಂಧಪಟ್ಟಂತೆ ಮಹಿಳೆಯೊಬ್ಬಳು ಪುರುಷರೊಟ್ಟಿಗೆ ಒಂದೇ ಕೋಣೆಯಲ್ಲಿದ್ದರೆ ಗಂಡಸಿಗೆ ಆಶೆ ಬರುವುದು ಸಹಜವೆಂಬ ಹೇಳಿಕೆ ನೀಡಿ, ನ್ಯಾಯಾಲಯವು ಆರೋಪಿಗಳನ್ನು ಖುಲಾಸೆ ಮಾಡಿತು. ಇವೆಲ್ಲವು ನ್ಯಾಯಾಂಗದ ಮಹಿಳಾ ವಿರೋಧಿ ನಿಲುವನ್ನು ತೋರುತ್ತದೆ. ಆದ್ದರಿಂದ ನ್ಯಾಯಾಂಗ ಕ್ರಿಯಾಶೀಲತೆ ಎಂಬುದು ಮಹಿಳಾ ಪರ ಎಂದುಕೊಳ್ಳುವುದು ಮೂರ್ಖತನವಾಗುತ್ತದೆ. ಉದಾಸೀನ ಪ್ರವೃತ್ತಿಯ ರಾಜ್ಯಾಂಗವನ್ನು ಪ್ರತಿಭಟಿಸುವ ವಾತಾವರಣ ನಿರ್ಮಾಣವಾಗಬೇಕಾಗಿದೆ. ಹಾಗಾಗಲು ಮಹಿಳೆಯರು ಒಟ್ಟಾಗಿ ಹೋರಾಡಬೇಕು. ನಮ್ಮೆಲ್ಲರ ಹೋರಾಟದ ಮೂಲಕ ರಾಜ್ಯಾಂಗವನ್ನು ಕಾರ್ಯೋನ್ಮುಖಗೊಳಿಸಿ ಮಹಿಳೆಯರಿಗೆ ಸಿಗಬೇಕಾಗಿರುವ ನ್ಯಾಯವನ್ನು ದೊರಕಿಸಿಕೊಳ್ಳಬೇಕು.

*ಸಂಪಾದಕೀಯ ಮಂಡಳಿ*

# ವೇಶ್ಯಾವೃತ್ತಿಗೆ ಸಂಪ್ರದಾಯದ ಪರವಾನಗಿ!

ವೆಂ. ವನಜ

ವೇಶ್ಯಾಪದ್ಧತಿ ನಮ್ಮ ಸಮಾಜದಲ್ಲಿ ದಿನೇ ದಿನೇ ಆಳವಾಗಿ ಬೇರು ಬಿಡುತ್ತಿರುವ, ಯಾವುದೇ ನಿವಾರಣೋಪಾಯಗಳಿಗೆ, ಪರಿಹಾರ ಕ್ರಮಗಳಿಗೆ ಜಗ್ಗದ ಪಿಡುಗುಗಳಲ್ಲೊಂದಾಗಿದೆ. ಇದರ ಬಗ್ಗೆ ಮಾತನಾಡುವಾಗಲೆಲ್ಲಾ ದೇವದಾಸಿ ಪದ್ಧತಿಯಂಥ ಪದ್ಧತಿಗಳನ್ನು ಉದಹರಿಸುತ್ತೇವೆ. ಆ ಮೂಲಕ ನಮ್ಮ ಸಂಪ್ರದಾಯಗಳ ಇನ್ನೊಂದು ಕರಾಳ ಮುಖವನ್ನು ಪರಿಚಯಿಸುತ್ತೇವೆ. ದೇವದಾಸಿ ಪದ್ಧತಿಯ ಬಗ್ಗೆ ಸಾಕಷ್ಟು ಸಂಶೋಧನೆಗಳು, ವರದಿಗಳು ಬಂದಿವೆ. ಈ ಪದ್ಧತಿಯಲ್ಲಿ ವೇಶ್ಯಾವೃತ್ತಿ ಜೀವನದ ಒಂದು ಅನಿವಾರ್ಯ ಮಾರ್ಗವಾಗಿರುತ್ತದೆ. ದೇವದಾಸಿಯರು ಸಾಮಾನ್ಯವಾಗಿ ಹಿಂದುಳಿದ ವರ್ಗದವರೇ ಆಗಿದ್ದು ದೇವಿ ಎಲ್ಲಮ್ಮನಿಗೆ ಮುಡಿಪಾಗಿ ಹೋಗುವ ಆಚಾರದೊಂದಿಗೆ ವೇಶ್ಯೆಯರಾಗುತ್ತಾರೆ. ಇದರೊಂದಿಗೇ ತಾವು ವಿವಾಹವಾಗುವ ಹಕ್ಕನ್ನು ಕಳೆದು ಕೊಳ್ಳುತ್ತಾರೆ. ವೃತ್ತಿಗೆ ಹೊರತಾದರೆ ಜೀವನಕ್ಕೆ ಅನ್ಯಮಾರ್ಗವೇ ಇರದಂತಾಗುತ್ತದೆ. ಇದೆಲ್ಲಾ ಸಂಪ್ರದಾಯದ ಹೆಸರಿನಲ್ಲಿ ನಡೆಯುವ ಮಹಿಳೆಯರ ಶೋಷಣೆಯಾದರೆ, ಪರಂಪರೆಯ ಹೆಸರಿನಲ್ಲೂ ವೇಶ್ಯಾವೃತ್ತಿಗೆ ಪರವಾನಗಿ ಉತ್ತರ ಭಾರತದ ಒಂದು ಜನಾಂಗಕ್ಕಿದೆ ಎನ್ನುವ ವಿಚಾರ ಅನೇಕರಿಗೆ ಹೊಸದಾಗಿರ ಬಹುದು. ಇನ್ನು ಆ ಜನಾಂಗದ ಬಗ್ಗೆ ಸಂಶೋಧನೆಗಳು, ಪ್ರಚಾರಗಳು ದೂರದ ಮಾತೇ ಸರಿ. ಇಂಥ ಜನಾಂಗವೊಂದರ ಬಗ್ಗೆ ದೆಹಲಿಯ ದೀಪಾದಾಸ್ ಎಂಬ ಮಹಿಳೆ ಅಧ್ಯಯನ ನಡೆಸಿರುವುದು ಇತ್ತೀಚೆಗೆ ವರದಿಯಾಗಿದೆ.

ಬೇಡಿಯಾ ಎಂಬ ಒಂದು ಜನಾಂಗ ಇಂದು ಪರಂಪರಾಗತವಾಗಿ ವೇಶ್ಯಾವೃತ್ತಿಯನ್ನು ಅವಲಂಬಿಸಿಕೊಂಡು ಬಂದಿದೆ. ಯಾವುದೇ ಕಾನೂನಿನ ಹಿಡಿತಕ್ಕೆ ಇದುವರೆಗೆ ಸಿಗದೆ ಅನೇಕ ತಲೆಮಾರುಗಳಿಂದ ವೃತ್ತಿಯನ್ನು ನಡೆಸಿಕೊಂಡು ಬಂದಿದೆ. ವೃತ್ತಿಯನ್ನು 'ಖಾನ್‌ದಾನಿ ಪೇಶಾ' ಎಂದು ತಿಳಿಯುವ ಇವರಿಗೆ ಯಾವುದೇ ಅಪರಾಧೀ ಪ್ರಜ್ಞೆ ಕಾಡುವುದಿಲ್ಲ. ನೈತಿಕತೆ, ಮೌಲ್ಯಗಳು, ಕಾನೂನಿನ ಬದ್ಧತೆ, ಶೋಷಣೆ ಮುಂತಾದ ಪದಗಳು ಇವರ ಗ್ರಹಿಕೆಯಿಂದ ಬಲುದೂರ.

ಇವರು ಭೌಗೋಳಿಕವಾಗಿ ಮಧ್ಯಪ್ರದೇಶ, ರಾಜಾಸ್ಥಾನ ಮತ್ತು ಉತ್ತರ ಪ್ರದೇಶಗಳಲ್ಲಿ ಕಂಡುಬರುತ್ತಾರೆ. ಗ್ರಾಮೀಣ ಮಟ್ಟದಲ್ಲಿ ಇವರು ಜಮೀನು ಮತ್ತಿತರ ಆಸ್ತಿಪಾಸ್ತಿಗಳನ್ನು ಹೊಂದಿದ್ದು ಮುಖ್ಯವಾಗಿ ವ್ಯವಸಾಯವನ್ನವಲಂಬಿಸಿರುತ್ತಾರೆ. ಬೆರಳೆಣಿಕೆಯಷ್ಟು ಮಂದಿ ಸರಕಾರಿ ನೌಕರಿಗಳಲ್ಲಿ - ಪೋಲೀಸು ಇಲಾಖೆ, ಬ್ಯಾಂಕು ಮತ್ತಿತರ ಖಾಸಗಿ ಸಂಸ್ಥೆಗಳಲ್ಲಿ ನೌಕರರಾಗಿದ್ದಾರೆ. ಅಲ್ಲಲ್ಲಿ ಒಬ್ಬೊಬ್ಬ ಡಾಕ್ಟರು, ಇಂಜಿನಿಯರ್ ಕಾಣಸಿಗಬಹುದು.

ವೃತ್ತಿನಿರತ ಬೇಡಿಯಾ ಮಹಿಳೆಯರನ್ನು 'ಬರ್ನಿಸ್' ಎಂದು ಕರೆಯುತ್ತಾರೆ. 'ಬರ್ನಿ' ಎಂಬ ಪದ ಮಧ್ಯಭಾರತದಲ್ಲಿ ವೇಶ್ಯೆಗೆ ಪರ್ಯಾಯ ಪದವಾಗಿ ಬಳಸಲಾಗುತ್ತದೆ. ಈ ಮಹಿಳೆಯರು ಆಗ್ರಾ, ಅಲಹಾಬಾದ್, ಮುಂಬೈ, ದೆಹಲಿ, ಕಾನ್‌ಪುರ, ಮೀರತ್ ಮತ್ತು ನಾಗಪುರಗಳ ಕೆಂಪುದೀಪ ಪ್ರದೇಶಗಳಲ್ಲಿ ಕಂಡುಬರುತ್ತಾರೆ. ಇನ್ನು ಕೆಲವರು ತಮ್ಮ ಹುಟ್ಟೂರುಗಳಲ್ಲೇ ವೃತ್ತಿ ನಡೆಸುತ್ತಾರೆ.

ಬೇಡಿಯಾ ಮಹಿಳೆಯರು ವೃತ್ತಿನಿರತರಾದರೆ, ಪುರುಷರು ಅವರ ರಕ್ಷಕರು, ಮಧ್ಯವರ್ತಿಗಳು ಅಥವಾ ತಲೆಹಿಡುಕರಾಗುವ ಮೂಲಕ ವೃತ್ತಿಗೆ ಬೆಂಬಲ ವ್ಯವಸ್ಥೆಯನ್ನು ಒದಗಿಸುತ್ತಾರೆ. ಈ ವೃತ್ತಿ ಜಾತಿವೃತ್ತಿಯಾಗಿರುವುದರಿಂದ ಚಿಕ್ಕ ವಯಸ್ಸಿನ ಹೆಣ್ಣುಮಕ್ಕಳು ವೃತ್ತಿಗೆ ಮುಖ ಮಾಡುತ್ತಾರಷ್ಟೇ ಅಲ್ಲ, ಕೆಂಪು ದೀಪ ಪ್ರದೇಶಗಳ ವೇಶ್ಯಾಗೃಹಗಳನ್ನು ನಿಯಂತ್ರಿಸುವಷ್ಟು ಶಕ್ತಿಶಾಲಿಗಳಾಗಿದ್ದಾರೆ. ವೇಶ್ಯಾಗೃಹಗಳನ್ನು ನಡೆಸುತ್ತಾ ಅದರಿಂದ ಬರುವ ಲಾಭವನ್ನು ಪಡೆಯುತ್ತಾರೆ. ಇತರರನ್ನು ಬಲವಂತವಾಗಿ ವೃತ್ತಿಗೆಳೆಯುವುದರಲ್ಲೂ ಇವರ ಪಾತ್ರವಿರುತ್ತದೆ. ಹೆಣ್ಣುಮಕ್ಕಳನ್ನು ಕೊಳ್ಳುವ-ಮಾರುವ ದಂಧೆಯಲ್ಲೂ ಹಿಂದೆ ಬಿದ್ದಿಲ್ಲ. ಇವರಿಂದ ಬಲಾತ್ಕಾರಕ್ಕೊಳಗಾಗಿ ದಂಧೆಗಿಳಿವ ಹೆಣ್ಣುಮಕ್ಕಳನ್ನು 'ಲೊಂಚಿ' ಎಂದು ಕರೆಯುತ್ತಾರೆ. ಈ ನತದೃಷ್ಟ ಹೆಣ್ಣುಮಕ್ಕಳು ಹಲವು ಕ್ರೂರ ವಿಧಾನಗಳಿಗೆ ಒಳಗಾಗಿ 'ದಾರಿ'ಗೆ ಬರುತ್ತಾರೆ. ಈ ಕೆಲಸಕ್ಕಾಗಿಯೇ ಬರ್ನಿಸ್ ಮಹಿಳೆಯರು ತಮ್ಮ ಹಳ್ಳಿಗಳಲ್ಲಿ ತರಬೇತಿ ಕೇಂದ್ರಗಳನ್ನು ತೆರೆಯುತ್ತಾರೆ.

ಹೀಗೆ ದೇಹ ಮಾರಾಟದ ವ್ಯವಸ್ಥಿತ ದಂಧೆಯಲ್ಲಿ ಬೇಡಿಯಾ ಜನಾಂಗ ಬಹುಮುಖ್ಯ ಪಾತ್ರ ವಹಿಸುತ್ತಿದೆ. ವಂಶಪಾರಂಪರಿಕವಾಗಿ ದಂಧೆಯ ನಿಯಂತ್ರಣವನ್ನು

ವರ್ಗಾಯಿಸುತ್ತಾ ವೃತ್ತಿಯ ಬೆಳೆಸುವುದನ್ನು ಕಾಣಬಹುದು. ಇಷ್ಟೇ ಅಲ್ಲದೆ 'ಬರ್ನಿಸ' ಮಹಿಳೆಯರು ಸಂಗೀತ, ನೃತ್ಯ ಮುಂತಾದ ಸಾಂಸ್ಕೃತಿಕ ಸಂಘಗಳ ಅಧ್ಯಕ್ಷರಾಗಿ, ಕಾರ್ಯದರ್ಶಿಗಳಾಗಿ ಉನ್ನತ ಸ್ಥಾನದಲ್ಲಿರುತ್ತಾರೆ. ಇವರೆಲ್ಲಾ ಹಿಂದೆ ದಂಧೆಯನ್ನು ನಡೆಸುತ್ತಿದ್ದವರೇ, ಇದಕ್ಕೆ ಇವರ ಮಾತೃಭಾಷೆ ಹೆಚ್ಚು ಸಹಾಯಕವಾಗಿದೆ. ಅಂದರೆ, ಯಾರಿಗೂ ಅರ್ಥವಾಗದ ಇವರ ಭಾಷೆ ದಂಧೆಗೆ ಸಂಬಂಧಿಸಿದ ರಹಸ್ಯಗಳನ್ನು ಕಾಪಾಡಲು ಬಳಕೆಯಾಗುತ್ತದೆ.

ಬೇಡಿಯಾ ಜನಾಂಗ ಮೂಲತಃ ಒಂದು ಅಲೆಮಾರಿ ಜನಾಂಗ ಎನ್ನುವ ಬಗ್ಗೆ ಭಿನ್ನಾಭಿಪ್ರಾಯವಿಲ್ಲವಾದರೂ ಇವರು ವೇಶ್ಯಾವೃತ್ತಿಯನ್ನೇ ಅವಲಂಬಿಸಿರುವುದರ ಬಗ್ಗೆ ಹಲವು ವಿವರಣೆಗಳಿವೆ. ರಸೆಲ್ ಮತ್ತು ಹೀರಾಲಾಲರ ಅಭಿಪ್ರಾಯದಂತೆ. ಇವರು ಕೊರವಂಜಿ ಕಳ್ಳರ ಜಾತಿಗೆ ಸೇರಿದವರು. 1891ರಲ್ಲಿ ಮಧ್ಯಪ್ರಾಂತಗಳಲ್ಲಿ ಉತ್ತರ ಜಿಲ್ಲೆಗಳಲ್ಲಿ 906 ಮಂದಿ ಬೇಡಿಯಾ ಜನಾಂಗದವರಿದ್ದರು. 1901ರಲ್ಲಿ ಇವರನ್ನು ನಾಟ್ ಜನಾಂಗದೊಂದಿಗೆ ಗುರುತಿಸಲಾಗಿತ್ತು. ಕೆಲವು ತಲೆಮಾರಿನ ಹಿಂದಿನ ಮಾತು. ಸೈನ್ಸ್‌ಮುಲ್ ಮತ್ತು ಮುಲ್ಲಾನುರ್ ಎಂಬ ಸೋದರರು ಭರತಪುರ ಗಡಿಯಲ್ಲಿ ವಾಸಿಸುತ್ತಿದ್ದರು. ಇವರ ಸಂತಾನವೇ ಸೆನ್ಸಿಯಸ್ ಮತ್ತು ಬೇಡಿಯಾ/ಕೊಲ್ಹಾಟಿ ಎಂದು ಕರೆಸಿಕೊಂಡರು.

ಈ ಜನಾಂಗದವರನ್ನೇ ಕೇಳಿದರೆ ತಮ್ಮ ಮೂಲದ ಬಗ್ಗೆ ಎರಡು ಬೇರೆ ಬೇರೆ ವಿವರಣೆಗಳನ್ನು ಕೊಡುತ್ತಾರೆ. ಮೊದಲನೆಯದೆಂದರೆ, ಭಾಟು, ಬ್ರಿಜ್ಬಾಸಿ ಗಂಧರ್ವ, ಕಬೂತರ್, ಕಂಜರ, ನ್ಯಾಟ್, ಸಂಸಿ ಮತ್ತು ರಂಜಾನಿ - ಇವೆಲ್ಲವೂ ಬೇಡಿಯಾ ಜನಾಂಗದ ಉಪಜಾತಿಗಳು. ಇವುಗಳ ಮೂಲ ಮುಸ್ಲಿಂ ರಾಜರಾದ ಮಹಮ್ಮದ್ ಘಸ್ನಿ ಮತ್ತು ಮಹಮ್ಮದ್ ಘೋರಿ ಕಾಲಕ್ಕೆ ಹೋಗುತ್ತದೆ. ಮುಸ್ಲಿಮರ ಧಾಳಿಗೆ ಹೆದರಿದ ಸಣ್ಣಪುಟ್ಟ ರಾಜ್ಯಗಳ ನಾಗರೀಕರು ಕಾಡುಗಳಲ್ಲಿ ಅವಿತಿಟ್ಟುಕೊಂಡರು. ಗೆರಿಲ್ಲಾಗಳಂತೆ ಯುದ್ಧ ಮಾಡತೊಡಗಿದರು. ಮುಸ್ಲಿಂ ರಾಜರ ಖಜಾನೆಗಳನ್ನು ಲೂಟಿ ಮಾಡಿದರು. ಕಾಲಕ್ರಮೇಣ ಅಲೆಮಾರಿಗಳಾದರು. ಜೀವನೋಪಾಯಕ್ಕಾಗಿ ಕೆಲವು ಅಪರಾಧಗಳಲ್ಲಿ ತೊಡಗಿದರು, ನಾಗರಿಕರಿಗೆ ಕಿರುಕುಳ ನೀಡತೊಡಗಿದರು. ಬ್ರಿಟಿಷರ ಕಾಲದಲ್ಲಿ ಇವರ ಚಲನವಲನಗಳ ಮೇಲೆ ನಿರ್ಬಂಧ ಹೇರಲಾಯಿತು; ಅಪರಾಧಗಳಿಗಾಗಿ ಪೋಲೀಸರು ಬೇಟೆಯಾಡತೊಡಗಿದರು. ಆಗ ಇವರು ತಮ್ಮ ರಕ್ಷಣೆಗಾಗಿ ರಾಜಮನೆತನದವರ ಮೊರೆ ಹೊಕ್ಕರು. ಅವರಿಗೆ ಕಾಣಿಕೆಯಾಗಿ ತಮ್ಮ ಹೆಂಗಸರನ್ನು ನೀಡಿದರು. ಹೀಗೆ ಬೇಡಿಯಾ ಮಹಿಳೆಯರನ್ನು ವೇಶ್ಯಾವೃತ್ತಿಗಿಳಿಸುವ ಸಂಪ್ರದಾಯ ಅಂದಿನಿಂದ ಆರಂಭವಾಯಿತು.

ಇನ್ನೊಂದು ವಾದವೆಂದರೆ, 19ನೇ ಶತಮಾನದಲ್ಲಿ ಠಾಕೂರನೊಬ್ಬನ ಹೆಂಡತಿ ವಿಧವೆಯಾದಳು. ತವರು ಮನೆಯವರ ಹಾಗೂ ಗಂಡನ ಮನೆಯವರ ಬೆಂಬಲವಿಲ್ಲದೆ ಅವಳು ಹಲವು ರೀತಿಯ ತೊಂದರೆಗೊಳಗಾದಳು. ಅವಳು ರಾಜಾಸ್ಥಾನದ ಕಾಡೊಂದರಲ್ಲಿ ವಾಸಿಸತೊಡಗಿದಳು. ಆಗ ದನಕರುಗಳನ್ನು ಮೇಯಿಸಲು ಬಂದ ಪುರುಷರೊಂದಿಗೆ ಸಂಪರ್ಕ ಬೆಳೆಯಿತು. ಫಲವಾಗಿ ಕೆಲವು ಮಕ್ಕಳ ತಾಯಿಯಾದಳು. ಆದರೆ ಆಕೆ ಮತ್ತವಳ ಮಕ್ಕಳು ಸಮಾಜಬಾಹಿರರಾದರು. ಅನಿವಾರ್ಯವಾಗಿ ಅವಳು ತನ್ನ ಹೆಣ್ಣು ಮಕ್ಕಳನ್ನು ವೇಶ್ಯಾವೃತ್ತಿಗೆ ತೊಡಗಿಸಿದಳು. ಇದು ಬೇಡಿಯಾ ಮಹಿಳೆಯರು ವೇಶ್ಯಾವೃತ್ತಿಗೆ ಆತುಕೊಂಡಿರುವುದರ ವಿವರಣೆ.

ಬೇಡಿಯಾ ಮಹಿಳೆಯರ ಜೀವನಚಕ್ರವನ್ನು ಎರಡು ಹಂತಗಳಲ್ಲಿ ಕಾಣಬಹುದು. ಮೊದಲನೆಯ ಹಂತವೆಂದರೆ, ಹುಡುಗಿಯರ ಆಯ್ಕೆ ಮತ್ತು ತರಬೇತಿ. ವೃತ್ತಿ ಪರಿಚಯ ಮತ್ತದರಲ್ಲಿ ಖಾಯಂ ಆಗಿ ಉಳಿದುಕೊಳ್ಳುವುದು ಎರಡನೆಯ ಹಂತ.

ಹುಡುಗಿಯರ ಆಯ್ಕೆಗೆ ನಿರ್ಧಿಷ್ಟ ಮಾನದಂಡಗಳು ಕಂಡುಬರುವುದಿಲ್ಲ. ಹೆಣ್ಣು ಮಕ್ಕಳಿಗೆ ಬಾಲ್ಯದಿಂದಲೇ ಮಾನಸಿಕ ಸಿದ್ಧತೆಗೆ ಬೇಕಾದ ಪರಿಸರ ನಿರ್ಮಾಣವಾಗಿರುತ್ತದೆ. ಅಲ್ಲದೆ ಸಾಂಪ್ರದಾಯಿಕ ಹಾಗೂ ಕೌಟುಂಬಿಕ ಒತ್ತಡಗಳು ಎಷ್ಟು ಶಕ್ತಿಶಾಲಿಯಾಗಿರುತ್ತವೆಂದರೆ ಅವುಗಳ ವಿರುದ್ಧ ಹೋಗುವ ವಯಸ್ಸು ಆ ಮಕ್ಕಳದಾಗಿರುವುದಿಲ್ಲ. ಇನ್ನೊಂದು ಕಾರಣ, ಆರ್ಥಿಕ ಆಕರ್ಷಣೆ. ಹೆಣ್ಣುಮಕ್ಕಳಿಗೆ ಆಯ್ಕೆಯ ಸ್ವಾತಂತ್ರ್ಯ ಕೊಡುವುದೆಂದರೆ, ಭಾರೀ ನಷ್ಟದ ವ್ಯವಹಾರ ಎಂದಾಗುತ್ತದೆ. ಹೀಗಾಗಿ ಹೆಣ್ಣು ಮಕ್ಕಳು ಯಾವುದೇ ಪ್ರತಿಭಟನೆಯ ಕುರುಹಿಲ್ಲದೆ ವೃತ್ತಿಗಿಳಿಯುವ ಪರಿಸ್ಥಿತಿ ನಿರ್ಮಾಣವಾಗುತ್ತದೆ.

ಹೀಗೆ ಪೂರ್ವ ನಿರ್ಧರಿತವಾದ ಭವಿಷ್ಯ ಜೀವನಕ್ಕೆ ಕಾಲಿಡುವ ಮೊದಲ ಹಂತವಾಗಿ ಹೆಣ್ಣುಮಕ್ಕಳು ತಮ್ಮ 7-8ನೇ ವಯಸ್ಸಿನಲ್ಲೇ ಲಲಿತಕಲೆಗಳು ಮತ್ತಿತರ ಕಸುಬಿಗೆ ಸಂಬಂಧಿಸಿದ ವಿಚಾರಗಳಲ್ಲಿ ತರಬೇತಿ ಪಡೆಯತೊಡಗುತ್ತಾರೆ. ಈ ತರಬೇತಿ ನೀಡುವವರಿಗೆ ಉಸ್ತಾದ್ ಅಥವಾ ಮಿರಾಸಿ ಎಂದು ಕರೆಯುತ್ತಾರೆ. ಉಸ್ತಾದ್ ಎಂದರೆ ಮುಸ್ಲಿಂ, ಮಿರಾಸಿ

ಎಂದರೆ ಹಿಂದೂ ಆಗಿರುತ್ತಾರೆ. ಇವರು ಮಕ್ಕಳಿಗೆ ಲಲಿತಕಲೆಗಳಷ್ಟೇ ಅಲ್ಲದೆ ಗಂಡಸರನ್ನು ಆಕರ್ಷಿಸುವ ಮತ್ತು ಲೈಂಗಿಕವಾಗಿ ಪ್ರಚೋದಿಸುವ ಕಲೆಯನ್ನೂ ಕಲಿಸಿಕೊಡುತ್ತಾರೆ. ಗಿರಾಕಿಗಳನ್ನು ಹೇಗೆ ನೋಡಿಕೊಳ್ಳಬೇಕು, ಸಂತೋಷ ಪಡಿಸಬೇಕು, ತಮ್ಮಲ್ಲಿರದ ಪ್ರಾಮಾಣಿಕತೆಯನ್ನು, ಅವಲಂಬನೆಯನ್ನು ಹೇಗೆ ಸುಳ್ಳೇ ಸುಳ್ಳೇ ಪ್ರಕಟಪಡಿಸಬೇಕು; ಭಾವನಾತ್ಮಕ ಸಂಬಂಧಗಳು ಹೇಗೆ ನಿಷಿದ್ಧ ಮುಂತಾದ ವಿಚಾರಗಳನ್ನು ಮಾತಿನ ಹಾಗೂ ನೃತ್ಯದ ಮೂಲಕ ಕಲಿಸಲಾಗುತ್ತದೆ.

ಯಶಸ್ವೀ ತರಬೇತಿಯ ನಂತರ ಹುಡುಗಿಯರನ್ನು 'ಮೆಹಫಿಲ್' ಅಥವಾ ನಗರಗಳ ದೊಡ್ಡ ವೇಶ್ಯಾಗೃಹಗಳಿಗೆ ಪರಿಚಯಿಸಲಾಗುತ್ತದೆ. ಅವರು 14-15 ವರ್ಷ ವಯಸ್ಸಿನವರಾಗಿ ವೃತ್ತಿಗಿಳಿಯುವ ಸಂದರ್ಭದಲ್ಲಿ 'ನತ್ ಉತರಾಮ್' ಅಥವಾ 'ಸರ್‌ಧುಕಾಯ್' ಎಂಬ ಶಾಸ್ತ್ರಾಚರಣೆ ನಡೆಸುತ್ತಾರೆ.

ತಾಯಿ, ಚಿಕ್ಕಮ್ಮ ಮುಂತಾದ ಹಿರಿಯರು ಹುಡುಗಿಯ ಸಂಗಾತಿಯನ್ನು ಆಯ್ಕೆ ಮಾಡುತ್ತಾರೆ. ಅವನು 'ಮೆಹಫಿಲ್'ಗೆ ಬರುವವರಲ್ಲಿ ಒಬ್ಬನಾಗಿ ಇರುತ್ತಾನೆ. ಈ ಆಯ್ಕೆಗೆ ಮಾನದಂಡವೆಂದರೆ, ಅವನ ಕೊಡುವ ಸಾಮರ್ಥ್ಯ. ಕನ್ಯೆಯಾದವಳಿಗೆ ಕೊಡುವ ಹಣದ ಮೊತ್ತ ಎರಡು ಸಾವಿರಗಳಿಂದ ಐವತ್ತು ಸಾವಿರಗಳವರೆಗೂ ಇರುತ್ತದೆ. ಅವನು ಹುಡುಗಿಗೆ ಉಡುಗೆ-ತೊಡುಗೆಗಳನ್ನೂ ಉಡುಗೊರೆಯಾಗಿ ನೀಡುತ್ತಾನೆ. ಇದೊಂದು ಸುಮಾರು ಇನ್ನೂರು ಮಂದಿ ಸೇರುವ ಸಮಾರಂಭವಾಗಿರುತ್ತದೆ (Jashn). ಅಕ್ಕಪಕ್ಕದಲ್ಲಿರುವ ವೇಶ್ಯೆಯರೇ ಇದರಲ್ಲಿ ಭಾಗವಹಿಸುವವರು. ಇವರೆಲ್ಲಾ ಹುಡುಗಿಗೆ ತನ್ನ ವೃತ್ತಿಯಲ್ಲಿ ಯಶ ಸಿಗಲಿ ಎಂದು ಹಾರೈಸುತ್ತಾರೆ. ಇದರಿಂದ ಹುಡುಗಿಗೆ ತಾನು ಪ್ರವೇಶಿಸಲಿರುವ ವೃತ್ತಿಯ ಬಗ್ಗೆ ಅಳುಕು, ಅಂಜಿಕೆಗಳ ಬದಲಿಗೆ ಹೆಮ್ಮೆ-ಅಭಿಮಾನಗಳುಂಟಾಗುತ್ತವೆ. ಇದೇ ಈ ಸಮಾರಂಭದ ಉದ್ದೇಶವೂ ಆಗಿರುತ್ತದೆ.

ಎರಡು-ಮೂರು ದಿನಗಳ ಈ ಸಮಾರಂಭದಲ್ಲಿ ಹುಡುಗಿಯನ್ನು ಹಿಂದೂ ಶಾಸ್ತ್ರಾಚರಣೆಯಂತೆ ಮದುವೆ ಮಾಡಿಕೊಡಲಾಗುತ್ತದೆ. ಆದರೆ ಒಂದು ವ್ಯತ್ಯಾಸವೆಂದರೆ, ಹುಡುಗಿಯ ಮದುವೆ ವರನ ಬದಲಿಗೆ ಹಣದೊಂದಿಗೆ ಆಗುತ್ತದೆ. ಅವಳು ಹಣಕ್ಕೆ ಪ್ರಾಮುಖ್ಯತೆ ನೀಡಬೇಕು, ಅದಕ್ಕೆ ಪ್ರಾಮಾಣಿಕಳಾಗಿರಬೇಕೇ ಹೊರತು ಯಾವುದೇ ಭಾವನೆಗಳಿಗಲ್ಲ; ಅವಳಿಗೆ ಹುಟ್ಟುವ ಮಕ್ಕಳ ತಂದೆ ಹಣವೇ ಹೊರತು ಯಾವುದೇ ವ್ಯಕ್ತಿಯಲ್ಲ ಎಂದು ತಿಳಿಸುವುದೇ ಆಗಿದೆ.

ಬೇಡಿಯಾ ಮಹಿಳೆಯರೆಲ್ಲಾ ಕೆಂಪುದೀಪ ಪ್ರದೇಶಗಳಲ್ಲೇ ಜೀವನಪರ್ಯಂತ ಇರುವುದಿಲ್ಲ. ಯಾರು ನಾಯಿಕಾ ಅಥವಾ ಚೌಧುರಿಯ ಸ್ಥಾನಕ್ಕೇರಿ ವೇಶ್ಯಾವಾಟಿಕೆಗಳನ್ನು ನಡೆಸುತ್ತಿರುತ್ತಾರೋ ಅವರು ಮಾತ್ರ ಇಲ್ಲೇ ಮುಂದುವರೆಯುತ್ತಾರೆ. ವೃತ್ತಿಜೀವನ ಸಾಕೆನಿಸಿದ ಕೆಲವರು ತಮ್ಮ ಹಳ್ಳಿಗಳಿಗೆ ಹಿಂದಿರುಗುತ್ತಾರೆ. ಇಲ್ಲವೇ ಕೆಂಪುದೀಪ ಪ್ರದೇಶಗಳನ್ನು ಬಿಟ್ಟು ಬೇರೆ ಪ್ರದೇಶಗಳಲ್ಲಿ ವಾಸಿಸತೊಡಗುತ್ತಾರೆ. ಇನ್ನು ಕೆಲವರು ವಿವಾಹಿತ ಪುರುಷರ ಮನೆಗಳಲ್ಲಿ ಇರತೊಡಗುತ್ತಾರೆ. ಅವರು ಕೊಡುವ ಹಣದಿಂದ ಇವರ ಬದುಕು ಸಾಗುತ್ತದೆ. ಇಂಥವರು ಅರಕ್ಷಿತತೆಯ ಭಾವನೆಯೊಂದಿಗೇ ಭಾವನಾತ್ಮಕ ಸಂಬಂಧಗಳನ್ನು ಬೆಳೆಸಿಕೊಳ್ಳುತ್ತಾರೆ. ಅವರು ತಮ್ಮ ಬಾಲ್ಯದಲ್ಲಿ ಪಡೆದ ತರಬೇತಿಗೆ ವಿರುದ್ಧವಾಗಿರುತ್ತದೆ. ಇನ್ನೊಂದು ವರ್ಗವೆಂದರೆ, ತಮ್ಮ ಜೀವಮಾನವನ್ನೆಲ್ಲಾ ವೃತ್ತಿಗೇ ಮೀಸಲಿಟ್ಟವರದು. ಇವರು ಯಾವುದೇ ಮೇಲ್ಮಟ್ಟದ ಸ್ಥಾನಗಳನ್ನು ಪಡೆದಿರುವುದಿಲ್ಲ. ಇತ್ತ ಹಣವೂ ಇಲ್ಲದೆ, ಅತ್ತ ಆಸ್ತಿಪಾಸ್ತಿಯೂ ಇಲ್ಲದೆ ಕಷ್ಟದ ಜೀವನ ನಡೆಸುತ್ತಾರೆ.

ಬೇಡಿಯಾ ಕುಟುಂಬಗಳಲ್ಲಿ ಹೆಣ್ಣುಮಕ್ಕಳು ಹುಟ್ಟುವುದು ಸ್ವಾಗತಾರ್ಹ ವಿಷಯ. ಕಾರಣ, ಅವರು ಪರಾವಲಂಬಿಗಳಾಗದೆ ವೃತ್ತಿಗಿಳಿದು ಕುಟುಂಬದ ಆರ್ಥಿಕ ಆಧಾರಸ್ತಂಭಗಳಾಗುತ್ತಾರೆ ಎನ್ನುವ ನಂಬಿಕೆ, ಭರವಸೆ, ಅದರಂತೆಯೇ ಹಲವಾರು ಕುಟುಂಬಗಳು ವೇಶ್ಯಾವೃತ್ತಿಗಿಳಿದ ತಮ್ಮ ಹೆಣ್ಣುಮಕ್ಕಳು ನೀಡುವ ಆರ್ಥಿಕ ಸಹಾಯವನ್ನೇ ಅವಲಂಬಿಸಿದ್ದು ಉತ್ತಮ ಆರ್ಥಿಕ ಮಟ್ಟವನ್ನು ಹೊಂದಿವೆ. ಉದಾಹರಣೆಗೆ, ದಿನಗೂಲಿ ಮಾಡುತ್ತಿದ್ದ ಕುಟುಂಬವೊಂದು ಅದರ ಹೆಣ್ಣುಮಗಳೊಬ್ಬಳು ವೃತ್ತಿಗಿಳಿದ ಮೇಲೆ ಮನೆಯೊಂದನ್ನು ಕಟ್ಟಲು ಸಾಧ್ಯವಾಯಿತು. ಹೀಗೆ ವೃತ್ತಿಗಿಳಿದ ಹೆಣ್ಣಿನ ಆದಾಯ ಮೂಲವನ್ನೇ ಅವಲಂಬಿಸಿರುವ ಈ ಕುಟುಂಬಗಳಲ್ಲಿ ಬರ್ನಿ ಮಹಿಳೆ ಸ್ವತಂತ್ರ ಸ್ಥಾನಮಾನಗಳನ್ನು ಪಡೆದುಕೊಳ್ಳುತ್ತಾಳೆ. ಆದರೆ ವೃತ್ತಿಯಿಂದ ಹೊರಬಂದ ಮೇಲೆ ಆ ಸ್ಥಾನಮಾನಗಳು, ಗೌರವ ಉಳಿದಿರುವುದಿಲ್ಲ. ಅಂಥವರು ಅಸಮಾಧಾನ, ಅಸಹನೆ, ಚುಚ್ಚುನುಡಿ, ದುರ್ವರ್ತನೆಗಳನ್ನು ಎದುರಿಸಬೇಕಾಗುತ್ತದೆ. ಅವರು ಕುಟುಂಬಗಳಿಗೆ ಹೊರೆಯೆಂದು ಭಾವಿಸಲ್ಪಡುತ್ತಾರೆ. ವೃತ್ತಿಯಲ್ಲಿರುವ ಮಹಿಳೆಯರನ್ನು ಗಂಡಿಗೆ ಸಮಾನವೆಂದು ಪರಿಗಣಿಸುತ್ತಾರೆ; ಆಸ್ತಿಯಲ್ಲಿ ಸಮಾನ ಹಕ್ಕುಗಳನ್ನು

ನೀಡುತ್ತಾರೆನ್ನುತ್ತಾರಾದರೂ, ವಾಸ್ತವದಲ್ಲಿ ಹಾಗಿರುವುದಿಲ್ಲ. ತಮ್ಮ ಹಕ್ಕುಗಳನ್ನು ಪ್ರತಿಪಾದಿಸುವ ಮಹಿಳೆಯರಿಗೆ ಮಾತ್ರ ಆಸ್ತಿಯಲ್ಲಿ ಪಾಲು ದಕ್ಕುತ್ತದೆಯೇ ಹೊರತು ಇತರರಿಗಲ್ಲ. ಕೆಲವೊಮ್ಮೆ ಅವರ ಮಕ್ಕಳೇ ಅವರಿಗೆ ಬೆಂಬಲ ನೀಡುವುದಿಲ್ಲ.

ವೃತ್ತಿಗಿಳಿದ ಮಹಿಳೆಯರು ತಮ್ಮ ಮಕ್ಕಳು ತಮ್ಮೊಂದಿಗಿರುವುದು ವೃತ್ತಿಯ ದೃಷ್ಟಿಯಿಂದ ಹಾಗೂ ತಮ್ಮ ಮಕ್ಕಳ ದೃಷ್ಟಿಯಿಂದ ಒಳ್ಳೆಯದಲ್ಲವೆಂದು ಭಾವಿಸುತ್ತಾರಾದ್ದರಿಂದ ಅವರನ್ನು ತಮ್ಮ ತಂದೆ-ತಾಯಿಂದಿರ ವಶಕ್ಕೆ ನೀಡುತ್ತಾರೆ. ಹೀಗೆ ಸಾಂಪ್ರದಾಯಿಕ ಪಾತ್ರಗಳಾದ 'ತಾಯಿ', 'ಹೆಂಡತಿ' ಪಾತ್ರಗಳನ್ನು ವಹಿಸದ ಈ ಮಹಿಳೆಯರ ಮಕ್ಕಳು ತಂದೆ ಯಾರೆಂದು ತಿಳಿಯದ ಪರಿಸ್ಥಿತಿಯಲ್ಲಿ ತಾಯ ಪ್ರೇಮದಿಂದಲೂ ವಂಚಿತರಾಗುತ್ತಾರೆ.

ಹಿಂದೆ ಬೇಡಿಯಾ ಜನಾಂಗದಲ್ಲಿ ವಿವಾಹ ಅಪರೂಪವಾಗಿತ್ತು. ಕಾರಣ, ಮಹಿಳೆಯರೆಲ್ಲಾ ವೇಶ್ಯಾವೃತ್ತಿಗಿಳಿಯುತ್ತಿದ್ದುದೇ ಆಗಿತ್ತು. ಕೇವಲ ಕುರೂಪಿಯಾದ ಹೆಣ್ಣುಮಕ್ಕಳು ವಿವಾಹವಾಗಲು ಅವಕಾಶವಿತ್ತು. ಪುರುಷರು ಇತರೆ ಉಪಜಾತಿಗಳ ಹೆಣ್ಣುಮಕ್ಕಳನ್ನು ವಿವಾಹವಾಗುತ್ತಿದ್ದರು. ಆದರೆ ಇಂದು ಪರಿಸ್ಥಿತಿ ಸ್ವಲ್ಪ ಬದಲಾದಂತೆ ಕಂಡುಬರುತ್ತಿದೆ. ಅಲ್ಲಲ್ಲಿ ಮಹಿಳೆಯರಲ್ಲಿ ಜಾಗೃತಿ ಉಂಟಾಗುತ್ತಿರುವ ಕಾರಣ ವಿವಾಹಗಳ ಸಂಖ್ಯೆ ಹೆಚ್ಚುತ್ತಿದೆ. ಮೊರಾನಾ ಜಿಲ್ಲೆಯ ಸಮಾಜ ಕಾರ್ಯಕರ್ತರೊಬ್ಬರ ಪ್ರಕಾರ 1956ರಿಂದೀಚೆಗೆ ಗ್ವಾಲಿಯರ್ ಚಂಬಲ್ ಪ್ರದೇಶದಲ್ಲಿ ಸುಮಾರು 300 ಹೆಣ್ಣುಮಕ್ಕಳು ವಿವಾಹವಾಗಿದ್ದಾರೆ. ಇವರು ತಮ್ಮ ಮಕ್ಕಳು ವೇಶ್ಯಾವೃತ್ತಿಗೆ ಬರಲು ಬಿಡುವುದಿಲ್ಲ. ಅದೇ ರೀತಿ ವೇಶ್ಯಾವೃತ್ತಿಯಲ್ಲಿರುವವರಿಗೆ ವಿವಾಹವಾಗಲು ಅವಕಾಶವಿರುವುದಿಲ್ಲ. ಒಂದು ವೇಳೆ ಒಬ್ಬ ಹುಡುಗ-ಹುಡುಗಿ ಪ್ರೀತಿಸಿದರೆ ಅವರು ಓಡಿಹೋಗುತ್ತಾರೆ. ಆಗ ಹುಡುಗನ ಕುಟುಂಬ ಹುಡುಗಿಯ ಕುಟುಂಬಕ್ಕೆ ಪರಿಹಾರಧನ ಕೊಡಬೇಕಾಗುತ್ತದೆ. ಇದರ ಮೊತ್ತ ಆ ಹುಡುಗಿ ವೃತ್ತಿಗಿಳಿದು ಸಂಪಾದಿಸಬಹುದಾಗಿದ್ದ ಹಣದ ಅಂದಾಜು ಮೊತ್ತವಾಗಿರುತ್ತದೆ. ಹೀಗೆ ಹೆಣ್ಣಿನ ಕುಟುಂಬಕ್ಕಾದ ನಷ್ಟವನ್ನು ಗಂಡಿನ ಕುಟುಂಬದವರು ತುಂಬಿಕೊಡಬೇಕಾಗುತ್ತದೆ. ಒಂದು ವೇಳೆ ಹುಡುಗಿ ವಾಪಸು ಬಂದರೆ ಆ ಹಣವನ್ನು ಹುಡುಗಿಯ ಮನೆಯವರು ಹಿಂತಿರುಗಿಸಬೇಕಾಗುತ್ತದೆ.

ಒಟ್ಟಿನಲ್ಲಿ ಬೇಡಿಯಾ ಮಹಿಳೆಯರು ತಾವಾಗಿಯೇ ವೇಶ್ಯಾವೃತ್ತಿಯನ್ನು ಆರಿಸಿಕೊಂಡವರಾಗಿರದೆ ಸೋಮಾರಿಗಳೂ, ಕುಡುಕರೂ ಆದ ತಮ್ಮ ಗಂಡಸರ ಒತ್ತಡಕ್ಕೆ ಬಂದವರೂ, ಹಣದಾಸೆಗೆ ಬಲಿಯಾದ ಬಲಿಪಶುಗಳೂ ಆಗಿದ್ದಾರೆ. ಪುರುಷರು ತಮ್ಮ ಮಹಿಳೆಯರು ವೃತ್ತಿಗಿಳಿಯುವುದನ್ನು 'ಖಾನ್‌ದಾನಿ' ವೃತ್ತಿ ಎಂದು ಸಮರ್ಥಿಸಿಕೊಂಡರೂ ತಮ್ಮ ಜಾತಿಯ ಹೆಸರನ್ನು ಮರೆಮಾಚಿ 'ಸಿಂಗ್' ಮುಂತಾದ ಹೆಸರನ್ನು ತಮ್ಮ ಹೆಸರಿನ ಕೊನೆಯಲ್ಲಿ ಸೇರಿಸಿಕೊಳ್ಳುತ್ತಾರೆ. ಹೀಗೆ ಒಂದು ರೀತಿಯಲ್ಲಿ ನಾಚಿಕೆ ಅನುಭವಿಸುತ್ತಿದ್ದರೂ ಮನದಾಳದಲ್ಲಿ ಮಾತ್ರ ಸುಲಭವಾಗಿ ಹಣ ಗಳಿಸುವ ಮಾರ್ಗ ಇದೊಂದೇ ಎಂದು ನಂಬುತ್ತಾರೆ. ಇದರಿಂದಲೇ ತಮ್ಮ ಮಹಿಳೆಯರನ್ನು ತಾವೇ ಶೋಷಿಸುತ್ತಾ ಪ್ರತಿಭಟಿಸುವ ಬಾಯಿಗಳನ್ನು ಮುಚ್ಚಿಸುತ್ತಾ ಬರುವಲ್ಲಿ ಸಫಲರಾಗಿದ್ದಾರೆ.

●

## ಅಭಿನಂದನೆ

ನಮ್ಮೆಲ್ಲರ ನೆಚ್ಚಿನ ವ್ಯಕ್ತಿಯಾದ ಇಳಾ ವಿಜಯ ಅವರ ಕೃತಿ **'ಬಂದರೋ ಬಂದರೋ'** ಬೀದಿನಾಟಕ ಕೃತಿಗೆ ರಾಜ್ಯ ನಾಟಕ ಅಕಾಡಮಿ ಪ್ರಶಸ್ತಿ ಸಂದಿದೆ. **ಸುಮಿತ್ರಾಬಾಯಿಯವರ 'ವಿಚಯ'** ವಿಮರ್ಶಾ ಸಂಕಲನಕ್ಕೂ ರಾಜ್ಯ ಅಕಾಡಮಿ ಪ್ರಶಸ್ತಿ ಬಂದಿದೆ. ಇವರೀರ್ವರನ್ನು ಮಾನಸ ಬಳಗ ಹೃತ್ಪೂರ್ವಕವಾಗಿ ಅಭಿನಂದಿಸುತ್ತದೆ.

# ಸತಿ - ಸಿಗದ ನ್ಯಾಯ

ಸಿ. ಜಿ. ಮಂಜುಳಾ

1995ರಲ್ಲಿ ರಾಜಸ್ತಾನದ ನೀಮ್ ಕಾ ಥಾಣಾ ಪೂರ್ಣ ಸೂರ್ಯಗ್ರಹಣದ ಹಾದಿಯಲ್ಲಿದ್ದು ರಾಷ್ಟ್ರದ ಗಮನ ಸೆಳೆದಿತ್ತು. 1996ರ ಅಕ್ಟೋಬರ್ ತಿಂಗಳಲ್ಲಿ ಈ ಸ್ಥಳ ಮತ್ತೊಂದು ಗ್ರಹಣಕ್ಕೆ ಮೂಕ ಸಾಕ್ಷಿಯಾಗಿತ್ತು.

ರಾಜಸ್ತಾನದ ಸಿಕಾರಾ ಜಿಲ್ಲೆಯ ದಿಯೊರಾಲಾ ಗ್ರಾಮದಲ್ಲಿ 1987ರ ಸೆಪ್ಟೆಂಬರ್ 4ರಂದು ರೂಪಾ ಕನ್ವರ್ (18) ಸತಿಯಾದ ಘಟನೆಯ ಎಲ್ಲಾ 32 ಆರೋಪಿಗಳನ್ನು ನೀಮ್ ಕಾ ಥಾಣಾದ ಅಡಿಷನಲ್ ಸೆಷನ್ಸ್ ನ್ಯಾಯಾಲಯ ಬಿಡುಗಡೆ ಮಾಡಿದೆ.

ಸತಿ ಘಟನೆ ನಡೆದಾಗ ಹಾಜರಿದ್ದವರ ವಿಚಾರಣೆಯನ್ನು ಪ್ರಾಸಿಕ್ಯೂಷನ್ ನಡೆಸಿಲ್ಲ ಎಂದು ಅಡಿಷನಲ್ ಸೆಷನ್ಸ್ ನ್ಯಾಯಾಧೀಶ ಓಂಪ್ರಕಾಶ್ ಗುಪ್ತಾ ತಮ್ಮ 21 ಪುಟಗಳ ತೀರ್ಪಿನಲ್ಲಿ ತಿಳಿಸಿದ್ದಾರೆ.

ಪ್ರಾಸಿಕ್ಯೂಷನ್ ಪರಿಶೀಲಿಸಿದ ಸಾಕ್ಷಿಗಳೆಲ್ಲಾ, ತಮಗೆ ಯಾರೊ ತಿಳಿಸಿದರೆಂದು, ಅವರಿವರಿಂದ ಕೇಳಿದ ಗಾಳಿಮಾತು ಎಂಬಂತಹ ಹೇಳಿಕೆಗಳನ್ನು ನೀಡಿದ್ದಾರೆ. ಘಟನೆಯನ್ನು ಪ್ರತ್ಯಕ್ಷ ಕಂಡಿರುವುದನ್ನು ಯಾರೂ ಹೇಳಿಲ್ಲ ಎಂದೂ ಕೋರ್ಟ್ ಎತ್ತಿ ಹಿಡಿದಿದೆ.

ಚಿತೆಯ ಮೇಲೆ ರೂಪ್ ಕನ್ವರ್ ಜೀವಂತವಾಗಿ ಕುಳಿತಿದ್ದಾಗ ರೂಪ್ ಕನ್ವರ್‌ಳ ಮೈದುನ ಪುಷ್ಪೇಂದ್ರಸಿಂಗ್ ಅಗ್ನಿಸ್ಪರ್ಶ ಮಾಡಿದ ಎಂಬುದನ್ನು ಸಾಬೀತು ಪಡಿಸಲೂ ಪ್ರಾಸಿಕ್ಯೂಷನ್ ವಿಫಲವಾಗಿದೆ.

ಈ ಪ್ರಕರಣದಲ್ಲಿ ರೂಪ್‌ಕನ್ವರ್‌ಳ ಮಾವ, ಮೈದುನರನ್ನು ಪ್ರಾಸಿಕ್ಯೂಷನ್ ಮುಖ್ಯ ಆರೋಪಿಗಳನ್ನಾಗಿಸಿದೆ. ಇವರಲ್ಲಿ ವೈದ್ಯನೊಬ್ಬನೂ ಸೇರಿದ್ದಾನೆ. ಈತ ಅಪರಾಧ ಸಂದರ್ಭದಲ್ಲಿ ರೂಪ ಕನ್ವರ್‌ಳ ಮಾವ ಇರಲಿಲ್ಲ ಎಂಬುದಕ್ಕೆ ಪುರಾವೆ ನೀಡಿದಾತ. ತನ್ನ ಆರೋಪಗಳ ಪರವಾಗಿ ಹಿರಿಯ ಪೋಲೀಸ್ ಅಧಿಕಾರಿಗಳು ಸೇರಿದಂತೆ 31 ಸಾಕ್ಷಿಗಳನ್ನು ಪ್ರಾಸಿಕ್ಯೂಷನ್ ಹಾಜರು ಪಡಿಸಿತ್ತು. ಹೀಗಿದ್ದೂ ಈ ಪ್ರಕರಣ ದುರ್ಬಲವಾದದ್ದು ಎಂದೇ ವಿಚಾರಣಾ ನ್ಯಾಯಾಲಯದ ನ್ಯಾಯಾಧೀಶರು ಭಾವಿಸಿದರು.

ಪ್ರಾಸಿಕ್ಯೂಷನ್ ಸಾಕ್ಷಿಗಳು ಘಟನೆಯ ನಂತರ ಸ್ಥಳಕ್ಕೆ ತಲುಪಿದ್ದು ಅವರು ಪ್ರತ್ಯಕ್ಷ ಸಾಕ್ಷಿಗಳಾಗಿಲ್ಲ ಎಂದು ಆರೋಪಿಗಳ ಪರ ವಕೀಲರು ವಾದಿಸಿದ್ದಾರೆ. ಸಾಕ್ಷಿಗಳ ಹೇಳಿಕೆಗಳನ್ನು ಪೊಲೀಸರು ತನಿಖೆಯ ಸಂದರ್ಭದಲ್ಲಿ ಪೆನ್ನಿನಿಂದ ದಾಖಲಿಸಿದ್ದಾರೆ. ಆದರೆ ನ್ಯಾಯಾಲಯದಲ್ಲಿ ಹಾಜರು ಪಡಿಸಲಾದ ಹೇಳಿಕೆಗಳ ಪ್ರತಿಗಳು ಟೈಪ್ ಮಾಡಿದವಾಗಿವೆ. ಹೀಗಾಗಿ ಈ ತನಿಖೆಯನ್ನು ಪೂರ್ಣ 'ಸ್ವಚ್ಛ' ಎಂದು ವಿವರಿಸಲಾಗುವುದಿಲ್ಲ ಎಂದೂ ಅವರು ನ್ಯಾಯಾಲಯದಲ್ಲಿ ವಾದಿಸಿದ್ದಾರೆ. ಆರೋಪಿಗಳ ವಿರುದ್ಧದ ಎಫ್‌ಐಆರ್ ಪ್ರತಿಯನ್ನು ಪೊಲೀಸರು ಕೂಡಲೇ ಸಂಬಂಧಿಸಿದ ಮ್ಯಾಜಿಸ್ಟ್ರೇಟರಿಗೆ ಕಳಿಸಿಲ್ಲ. ಹೀಗಾಗಿ ಇದು ದಾಖಲಾಗಿದೆ ಎಂದು ಹೇಳುವ ಸಂದರ್ಭದಲ್ಲಿ ಇದು ದಾಖಲಾಗಿಲ್ಲ ಎಂದೂ ಆರೋಪಿಸಲಾಗಿದೆ.

ರೂಪ ಕನ್ವರ್ ಸತಿಯಾದ ನಂತರದ 9 ವರ್ಷಗಳಲ್ಲಿ ದಿಯೊರಾಲಾದಲ್ಲಿ ಹೆಚ್ಚೇನೂ ಬದಲಾವಣೆಗಳಾಗಿಲ್ಲ. ಆದರೆ ಆರೋಪಿಗಳ ಬಿಡುಗಡೆಯ ನಂತರ ಗ್ರಾಮದಲ್ಲಿ ಸಂಭ್ರಮದ ವಾತಾವರಣ ತುಂಬಿದೆ ಎಂಬುದನ್ನು ಪತ್ರಿಕಾ ವರದಿಗಳು ತಿಳಿಸಿವೆ.

ಆ ಪ್ರಕರಣದ ಮುಖ್ಯ ಆರೋಪಿ ರೂಪ್‌ಕನ್ವರ್‌ಳ ಮಾವ ಸುಮರ್‌ಸಿಂಗ್ ಕೋರ್ಟ್ ತೀರ್ಪಿನ ಬಗ್ಗೆ ಸಂತಸ ಗೊಂಡಿದ್ದಾರೆ. ಕುಟುಂಬದ ಹಿರಿಯರ ಬುದ್ಧಿವಾದ ಮೀರಿ ತಮ್ಮ ಸೊಸೆ ತಾನೇ ಸ್ವತಃ ಸತಿಯಾಗುವುದನ್ನೂ ಆಯ್ಕೆ ಮಾಡಿಕೊಂಡಿದ್ದಾಳೆಂಬುದನ್ನು ನ್ಯಾಯಾಲಯ ಎತ್ತಿ ಹಿಡಿದಿದೆ ಎಂದು ಅವರು ಹೇಳುತ್ತಾರೆ.

"ರೂಪ್ ಕನ್ವರ್ ನಿಜವಾಗಿಯೂ ನನ್ನ ಮಗನನ್ನು (ಮಾಲ್‌ಸಿಂಗ್) ಪ್ರೀತಿಸಿದ್ದಳು. ಆತ ಧಿಡೀರ್ ಕಾಯಿಲೆ ಬಿದ್ದು 1987ರ ಸೆಪ್ಟೆಂಬರ್ 4ರಂದು ತೀರಿಕೊಂಡಾಗ ಆ ನೋವು ಭರಿಸಲಾಗದೆ 'ಸತಿ'ಯಾಗಲು ನಿರ್ಧರಿಸಿದಳು. ಈ ತೀರ್ಪು ಕೊಲೆ ಹಾಗೂ ಸಂಚಿನ ಎಲ್ಲಾ ಆರೋಪಗಳಿಂದ ಮುಕ್ತವಾಗಿಸಲು ನಮಗೆ ನೆರವಾಗಿದೆ" ಎಂದೂ ಅವರು ವಿವರಿಸುತ್ತಾರೆ.

ರೂಪ್‌ಳ ದೊಡ್ಡಪ್ಪ ಅರ್ಜುನ್‌ಸಿಂಗ್ ಸೆಪ್ಟೆಂಬರ್ 4ರ ಬೆಳಿಗ್ಗೆ ನಡೆದ ನಾಟಕದ ಮುಖ್ಯ ಸೂತ್ರಧಾರಿ. ಆದರೆ ಆತ 'ಸತಿ' ತಪ್ಪಿಸಲು ಯತ್ನಿಸಿದುದಾಗಿ ಪ್ರತಿಪಾದಿಸುತ್ತಾನೆ.

"ಮಾಲ್‌ಸಿಂಗ್ ದೇಹವನ್ನು ಮನೆಗೆ ತಂದಾಗ ರೂಪ್‌ಕನ್ವರ್ ಆತನ ಮುಖವನ್ನು ನೋಡಬೇಕೆಂದು ಒತ್ತಾಯಿಸಿದಳು. ರಜಪೂತನಲ್ಲಿ, ವಿಧವೆಗೆ ಆಕೆಯ ಪತಿಯ ಮುಖ ತೋರಿಸುವ ಸಂಪ್ರದಾಯವಿಲ್ಲ. ಆಗುವುದಿಲ್ಲ ಎನ್ನುವುದನ್ನು ಆಕೆ ಒಪ್ಪಲೇ ಇಲ್ಲ. ಕೋಣೆಯೊಳಗೆ ನಡೆದ ಆಕೆ ತನ್ನ ಅತ್ತ ಸೇರಿದಂತೆ ಎಲ್ಲರೂ ಅಳುವುದನ್ನು ನಿಲ್ಲಿಸ ಬೇಕೆಂದು ಆದೇಶಿಸಿದಳು. ಆ ನಂತರ ಪತಿಯ ದೇಹದೊಡನೆ ಒಬ್ಬಳೇ ಎರಡು ಗಂಟೆ ಕಾಲ ಕಳೆದಳು. ಪತಿಯ ಕಿವಿಯಲ್ಲಿ ಏನನ್ನೋ ಮೂರು ಬಾರಿ ಪಿಸುಗುಡುವುದನ್ನು ಕಂಡೆವು. ಆಗ ಆತ ವಾಸ್ತವವಾಗಿ ಕಣ್ಣೇ ಬಿಟ್ಟಿದ್ದನ್ನು ಕಂಡೆವು. ಆ ನಂತರ ಆಕೆ ಮದುವಣಗಿತ್ತಿಯ ವೇಷ ತೊಟ್ಟು ಶವದ ಹಿಂದೆ ಗ್ರಾಮದ ಬೀದಿಗಳಲ್ಲಿ ನಡೆದು ಹೋದಳು. ಈ 3 ಕಿ.ಮೀ. ದೂರವನ್ನು ಆಕೆ ಕಾಲ್ನಡಿಗೆಯಲ್ಲಿ ಕ್ರಮಿಸಿದುದನ್ನು ಸಾವಿರಾರು ಗ್ರಾಮಸ್ಥರು ಕಂಡಿದ್ದಾರೆ. ಆಕೆಗೆ ಇಷ್ಟವಿಲ್ಲದೆ, ಆಕೆಗೆ ಮತ್ತು ಬರಿಸುವ ಔಷಧ ಹಾಕಿ ಅಥವಾ ಬಲವಂತದಿಂದ ಈ ಕೆಲಸ ಮಾಡಿಸಿಲ್ಲ ಎಂಬುದನ್ನು ಗ್ರಾಮದ ಜನರು ನೋಡಿದ್ದಾರೆ" ಎಂದೂ ಅರ್ಜುನ್‌ಸಿಂಗ್ ಹೇಳುತ್ತಾರೆ".

ಈ ಪುರಾಣ ಕಥೆಯ ಸ್ಪರ್ಶ ನೀಡುವ ಈ ಸಾಮೂಹಿಕವಾದ ಪ್ರಕ್ರಿಯೆಯನ್ನು ಗ್ರಾಮಸ್ಥರು ಕುರುಡಾಗಿ ನಂಬಿದ್ದಾರೆ. ಇದನ್ನು ಅಲ್ಲಗೆಳೆಯುವಂತಹವರು ಗ್ರಾಮದಲ್ಲಿ ಸಿಗುವುದೇ ಕಷ್ಟ.

ರಜಪೂತ ರೈತನೊಬ್ಬನ ಪತ್ನಿ ಬುಧಾಸಿಂಗ್ ಹೀಗೆ ಘೋಷಿಸುತ್ತಾಳೆ.

"ದಿಯೊರಾಲಾ 'ಸತಿ'ಯರಿಗೆ ಪ್ರಸಿದ್ಧವಾದುದು, ರೂಪ್‌ಳ ಸಾವಿಗೆ ಮುಂಚೆ ನಾಲ್ವರು ಇಲ್ಲಿ ಸತಿಯಾಗಿದ್ದಾರೆ".

ರೂಪ್ ಕನ್ವರ್‌ಗೆ ಪತಿ ಬಗೆಗಿದ್ದ ಅರ್ಪಣಾ ಮನೋಭಾವವನ್ನು ಸಮರ್ಥಿಸಿ ಯಾರೂ ಏನನ್ನೂ ಹೇಳುವುದಿಲ್ಲ. ಆಕೆ ಆತನ ಜತೆಗೆ ಕಳೆದ ಸಮಯ ಅಲ್ಪಾವಧಿಯದಾಗಿತ್ತು. 1987ರ ಜನವರಿಯಲ್ಲಷ್ಟೇ ಆಕೆಯ ವಿವಾಹವಾಗಿತ್ತು. ವೈದ್ಯಕೀಯ ಪ್ರವೇಶ ಪರೀಕ್ಷೆಯಲ್ಲಿ ಪಾಸಾಗದ ಕಾರಣ ಅನುಭವಿಸುತ್ತಿದ್ದ ಮಾನಸಿಕ ಖಿನ್ನತೆಗಾಗಿ ಮಾಲ್‌ಸಿಂಗ್ ಆಗ ಮಾನಸಿಕ ಚಿಕಿತ್ಸೆ ಪಡೆಯುತ್ತಿದ್ದ. ನಗರದಲ್ಲಿ ಬೆಳೆದು ಕಾನ್ವೆಂಟ್‌ನಲ್ಲಿ ಶಿಕ್ಷಣ ಪಡೆದ ರೂಪ್, ಬ್ಯೂಟಿ ಪಾರ್ಲರ್ ಆರಂಭಿಸುವ ಉತ್ಸುಕತೆ ಹೊಂದಿದ್ದಳು. ಆಕೆ ದಿಯೊರಾಲಾಗೆ ನೀಡಿದ್ದ ಭೇಟಿ ಎರಡು ಬಾರಿ ಮಾತ್ರ. ಮದುವೆಯಾದ ತಕ್ಷಣ ಒಮ್ಮೆ; ಮತ್ತೊಮ್ಮೆ ಬೆಂಕಿಗೆ ಆಹುತಿಯಾದಾಗ. ಇತರ ಹಳ್ಳಿ ಹೆಣ್ಣು ಮಕ್ಕಳಿಗಿರುವ ಯಾವುದೇ ಹಿಂಜರಿಕೆಗಳೂ ಆಕೆಗಿರಲಿಲ್ಲ. ಆಕೆ ಕೂದಲು ಕತ್ತರಿಸಿಕೊಂಡಿದ್ದಳು. ಅಲ್ಲದೆ ಸೆರಗಿನಿಂದ ಮುಖ ಮುಚ್ಚಿಕೊಳ್ಳುವ ಪರ್ದಾ ಪದ್ಧತಿಯನ್ನೂ ಅನುಸರಿಸುತ್ತಿರಲಿಲ್ಲ. ತನ್ನ ಸಾವಿಗೆ ಮುಂಚೆ ಹತ್ತಿರದ ಹಳ್ಳಿಯಾದ ಅಜಿತ್‌ಪುರ್‌ನಲ್ಲಿ ರೋಗನಿರೋಧಕ ಚುಚ್ಚುಮದ್ದು ಶಿಬಿರಕ್ಕೆ ಹಾಜರಾಗಲು ಮಕ್ಕಳ ತಂಡವೊಂದನ್ನು ಒಗ್ಗೂಡಿಸಿದ್ದಳು.

ದಿನಪತ್ರಿಕೆಗಳಿಂದ 'ಸತಿ' ಬಗ್ಗೆ ಓದಿದ ಜೈಪುರದಲ್ಲಿ ನೆಲೆಸಿರುವ ರೂಪ್‌ಳ ತಂದೆ ತಾಯಿಯರ ಮೊದಲ ಪ್ರತಿಕ್ರಿಯೆ ಆಕ್ರೋಶದ್ದಾಗಿತ್ತು. ಆದರೆ ದಿಯೊರಾಲಾಗೆ ಆಕೆಯ ಸೋದರ ಪ್ರಯಾಣ ಮಾಡಿದ ತಕ್ಷಣ ಈ ಆಕ್ರೋಶ ಭಯಭಕ್ತಿಯದಾಗಿ ಪರಿವರ್ತನೆಯಾಯಿತು.

ಸಾವಿರಾರು ಸಶಸ್ತ್ರ ರಜಪೂತ ಯುವಕರು 'ಸತಿಸ್ಥಳ' ಕಾಯುತ್ತಿದ್ದ ದೃಶ್ಯ, 'ಸತಿ'ಯ 13ನೇ ದಿನ ನಡೆಸುವ ಚುನ್ರಿ ಉತ್ಸವದಲ್ಲಿ ಹಲವಾರು ಲಕ್ಷ ರಜಪೂತ ಪುರುಷ-ಮಹಿಳೆಯರ ಮೇಳ ಆತ ಮತ್ತು ಆತನ ಕುಟುಂಬದವರ ಮನಃ ಪರಿವರ್ತನೆಗೆ ಕಾರಣವಾಯಿತು. ರಜಪೂತ್ ಹೆಮ್ಮೆಯ ಪುನರುತ್ಥಾನದೊಂದಿಗೆ ಇದನ್ನು ಗುರುತಿಸಿಕೊಂಡು, ವಿದೇಶಿ ಆಕ್ರಮಣಕಾರರಿಗೆ ಶರಣಾಗುವುದರ ಬದಲು ಜೌಹಾರ್ ಪದ್ಧತಿ ಅನುಸರಿಸಿದ ಪದ್ಮಿನಿ ಮತ್ತಿತರ ರಾಜಕುಮಾರಿಯರ ಜತೆ ತಮ್ಮ ಪುತ್ರಿಯನ್ನ ಸಮೀಕರಿಸಿಕೊಂಡರು.

ಈ ನಂಬಿಕೆ ಎಷ್ಟು ಪೂರ್ಣವಾಗಿ ಬೇರೂರಿದೆ ಎಂದರೆ, ಸತಿ ಆಚರಿಸಲು ಹುಡುಗಿಯನ್ನು ಬಲಾತ್ಕರಿಸಲಾಯಿತು ಎಂಬುದನ್ನು ಪ್ರತಿಪಾದಿಸಲು ಒಂದು ಸಾಕ್ಷಿಯನ್ನು ತರಲೂ ಪ್ರಾಸಿಕ್ಯೂಷನ್ ವಿಫಲವಾಗಿದೆ.

ಆರೋಪಿಗಳ ಪರ ವಕೀಲರಾದ ಕೇದಾರನಾಥ ಗುಪ್ತಾ ಅವರು "ಈ ಮುಖ್ಯ ಪ್ರಕರಣದಲ್ಲಿ ಒಂದಾದರೂ ಸಾಕ್ಷಿಯನ್ನು ಪ್ರಶ್ನಿಸುವ ಅವಕಾಶವೇ ಬರಲಿಲ್ಲ ಎಂಬುದನ್ನು ಕಲ್ಪಿಸಿಕೊಳ್ಳಲು ಸಾಧ್ಯವೆ? ಸಾವಿರಾರು ಜನರು ಸತಿ ಆಚರಣೆಯನ್ನು ನೋಡಿದರು. ಆದರೆ ಚಿತೆಗೆ ಅಗ್ನಿ ಸ್ಪರ್ಶ ಮಾಡಿದವರಾರು ಎಂಬುದು ಯಾರಿಗೂ ಗೊತ್ತಿಲ್ಲ. ತಮ್ಮ ಹೇಳಿಕೆಗಳನ್ನು ಬಲವಂತದಿಂದ ಪೊಲೀಸರು ದಾಖಲಿಸಿದ್ದಾರೆ ಎಂದು ಎಲ್ಲಾ ಸಾಕ್ಷಿಗಳೂ ನ್ಯಾಯಾಧೀಶರಿಗೆ ಹೇಳಿದ್ದಾರೆ" ಎಂದು ವಾದಿಸುತ್ತಾರೆ.

ರಾಜಕೀಯ ಕಾರಣಗಳಿಗಾಗಿ ಈ ಪ್ರಕರಣವನ್ನು ಉದ್ದೇಶಪೂರ್ವಕವಾಗಿ ರಾಜ್ಯ ಸರ್ಕಾರ ನಾಶಗೊಳಿಸಿತು ಎಂಬುದು ಎಸ್. ಡಿ. ಅಗರ್‌ವಾಲ್ ನೇತೃತ್ವದ ಪ್ರಾಸಿಕ್ಯೂಷನ್ ಭಾವನೆ.

"ರಜಪೂತರು ಅಲ್ಪ ಸಂಖ್ಯೆಯಲ್ಲಿರಬಹುದು. ಆದರೆ ಅವರು ಭಾರೀ ಅಧಿಕಾರ ಹೊಂದಿದ್ದಾರೆ, ಅವರ ವಿರೋಧ ಕಟ್ಟಿಕೊಳ್ಳುವುದು ಯಾರಿಗೂ ಇಷ್ಟವಿಲ್ಲ" ಎಂದು ಅವರು ಹೇಳುತ್ತಾರೆ.

ಈ ಪ್ರಕರಣವನ್ನು ಹೇಗೆ ದುರ್ಬಲಗೊಳಿಸಲಾಯಿತು ಎಂಬುದನ್ನು ಎತ್ತಿ ಹೇಳಲು ಅನೇಕ ಅಂಶಗಳನ್ನು ಅಗರ್‌ವಾಲ್ ಪಟ್ಟಿ ಮಾಡುತ್ತಾರೆ.

9 ವರ್ಷಗಳ ಅವಧಿಯಲ್ಲಿ 9 ನ್ಯಾಯಾಧೀಶರನ್ನು ಬದಲಿಸಲಾಯಿತು. 1988ರ ವೇಳೆಗೆ ಮುಖ್ಯ ಸಾಕ್ಷಿಗಳಾದ ಗ್ರಾಮ ಪುರೋಹಿತ ಬಾಬೂಲಾಲ್ ಶರ್ಮಾ, ಗ್ರಾಮದ ಮರಗೆಲಸದವನಾದ ಬೋದು ಖಾಟಿ, ಕ್ಷೌರಿಕ ಬನ್ಸಿ ನಾಣಿ - ಎಲ್ಲರೂ ಸತಿಯನ್ನು ತಾವು ನೋಡಲಿಲ್ಲ ಎಂಬುದನ್ನು ಪ್ರತಿಪಾದಿಸುವುದಕ್ಕಾಗಿ ತಂತಮ್ಮ ನಿಲುವುಗಳನ್ನು ಬದಲಿಸಿದ್ದರು.

ಮುಖ್ಯ ಜ್ಯುಡಿಷಿಯಲ್ ಮ್ಯಾಜಿಸ್ಟ್ರೇಟ್ ಚಂದ್ರಲೇಖಾ ಅವರ ಸಮ್ಮುಖದಲ್ಲಿ ದಾಖಲು ಮಾಡಲಾದ ಈ ಪ್ರಮುಖ ಸಾಕ್ಷಿಗಳನ್ನು ನ್ಯಾಯಾಲಯ ಹೇಗೆ ಕಡೆಗಣಿಸಿತು ಎಂದೂ ನೋವಿನ ದನಿಯಲ್ಲಿ ಅಗರ್‌ವಾಲ್ ಅಚ್ಚರಿ ವ್ಯಕ್ತಪಡಿಸುತ್ತಾರೆ. ಈ ಎಲ್ಲಾ ಹೇಳಿಕೆಗಳೂ ಒತ್ತಡದಿಂದ ಮಾಡಿದ್ದಲ್ಲ ಎಂಬುದನ್ನು ಚಂದ್ರಲೇಖಾ ದಾಖಲಿಸಿದ್ದಾರೆ.

ಸತಿ ಪ್ರಕರಣದ ವಿಚಾರಣೆಯ ನಿಯಮಿತ ಉಸ್ತುವಾರಿ ವಹಿಸದೆ ದೊಡ್ಡ ತಪ್ಪು ಮಾಡಿದುದಾಗಿ ಜೈಪುರ ಮಹಿಳಾ ಕಾರ್ಯಕರ್ತರು ಒಪ್ಪಿಕೊಳ್ಳುತ್ತಾರೆ. ಆರಂಭದಲ್ಲಿ ಸತಿ ಸ್ಥಳದಲ್ಲಿ ಯಾವುದೇ ದೇವಾಲಯ ನಿರ್ಮಾಣ ಪಡೆಯುವುದಷ್ಟೇ ಅವರ ಕಾರ್ಯ ತಂತ್ರವಾಗಿತ್ತು. ಇದರಲ್ಲಿ ಅವರು ಯಶಸ್ಸನ್ನೂ ಪಡೆದರು. ರಾಜಸ್ಥಾನ ಸಶಸ್ತ್ರ ಪಡೆಯ ಅರ್ಧ ಡಜನ್ ಕಾನ್‌ಸ್ಟೇಬಲ್‌ಗಳು ಇಲ್ಲಿ ದಿನವಿಡೀ ಕಾವಲಿದ್ದಾರೆ.

ಈ ಪ್ರಕರಣವನ್ನು ಮುಚ್ಚಿ ಹಾಕಲು ರಾಜಸ್ಥಾನ ಸರ್ಕಾರ ಯತ್ನಿಸುತ್ತಿದ್ದಾಗ, ಮಹಿಳಾ ಸಂಘಟನೆಗಳ ಅವಿರತ ಪ್ರಯತ್ನ "1987ರ ಸತಿ ಆಚರಣೆ(ತಡೆ)ಕಾಯಿದೆ" ಜಾರಿಗೆ ಕಾರಣವಾಯಿತು.

ಈ ಕಾಯಿದೆ 'ಸತಿ'ಯ ವೈಭವೀಕರಣಕ್ಕೆ ಶಿಕ್ಷೆ ವಿಧಿಸುವುದಲ್ಲದೆ, ಇದೇ ಘಟನೆಯನ್ನೇ ಆತ್ಮಹತ್ಯೆ ಎಂದೂ ಪರಿಗಣಿಸುತ್ತದೆ. ಹೀಗಾಗಿ ಇದರ ಹೊಣೆಗಾರಿಕೆ ಇದನ್ನು ಆಚರಿಸುವ ಮಹಿಳೆಯ ಮೇಲಷ್ಟೇ ಇರುತ್ತದೆ. ಈ ಹೆಜ್ಜೆ ಇರಿಸಲು ಕಾರಣರಾದವರ ಪಾತ್ರವನ್ನು ಇದು ಇಲ್ಲವಾಗಿಸಿ ಬಿಡುತ್ತದೆ.

ಇದಲ್ಲದೆ ಅಪರಾಧದ ಸ್ಥಳದಲ್ಲಿ ಹಾಜರಿದ್ದ ಎಲ್ಲರೂ ಇದರಲ್ಲಿ ಭಾಗಿ ಎಂದೂ ಈ ಕಾನೂನು ಎಣಿಸುತ್ತದೆ. ಇದು ನೋಡುವವರು ಮತ್ತು ಅದನ್ನು ವಾಸ್ತವವಾಗಿ ಆಚರಿಸುವವರ ಮಧ್ಯೆ ಯಾವುದೇ ವ್ಯತ್ಯಾಸ ಮಾಡುವುದಿಲ್ಲ.

ಕಾನೂನಿನ ದೌರ್ಬಲ್ಯಗಳಿಗೆ ರಾಜಕೀಯ ದೌರ್ಬಲ್ಯಗಳು ಸತಿ ಆಚರಣೆಯ ವಿರುದ್ಧ ದೃಢ ನಿಲುವು ತಾಳಲು ತಡೆಯಾಗಿವೆ. ಕಡೆಗೂ ಆರೋಪಿಗಳ ಬಿಡುಗಡೆ ಆದೇಶದ ವಿರುದ್ಧ, ಹೈಕೋರ್ಟ್‌ನಲ್ಲಿ ಮೇಲ್ಮನವಿಯನ್ನು ರಾಜ್ಯ ಸರ್ಕಾರ ಸಲ್ಲಿಸಲು ನಿರ್ಧರಿಸಿದೆ.

ಕೋರ್ಟ್ ತೀರ್ಪಿನ ನಂತರ ತಮ್ಮ ಬಿಡುಗಡೆ ಆದ ಮೇಲೆ ರೂಪಳ ಮಾವ ಸುಮರ್‌ಸಿಂಗ್ ತಮ್ಮ ಬದುಕಿನ 9 ವರ್ಷ, 1 ತಿಂಗಳು ಹಾಗೂ 7 ದಿನಗಳನ್ನು ಜೈಲಿನಲ್ಲಿ ಕಳೆದುಕೊಂಡ ಬಗ್ಗೆ ಆಕ್ರೋಶ ವ್ಯಕ್ತಪಡಿಸಿದ್ದಾರೆ. ಬಹುಶಃ ಅವರು ಇದನ್ನು ನೆನಪಿಸಿಕೊಳ್ಳುವುದು ಅಗತ್ಯ - ಅವರ ಸೊಸೆ ಕೇವಲ ಕೆಲವೇ ವರ್ಷಗಳನ್ನು ಕಳೆದುಕೊಳ್ಳಲಿಲ್ಲ. ಯಾವುದೇ ಸಂದರ್ಭದಲ್ಲೂ ಸಮರ್ಥಿಸಲಾಗದ ಸಾಮಾಜಿಕ ಆಚರಣೆಯಿಂದ ಆಕೆಯ ಇಡೀ ಬದುಕೇ ಕಳೆದುಹೋಯಿತು.

●

## ಬಿಡಿ

ವಜ್ರಾ ಪಾಟೀಲ್

ಸೀತೆ
ಸಾವಿತ್ರಿ
ಅಹಲ್ಯ
ದ್ರೌಪದಿ
ನಾವಾಗುವುದು
ಬೇಕಿಲ್ಲ
ನಾವು
ನಾವಾಗೆ
ಬದುಕಲು ಬಿಡಿ!!

# ಶಹನಾಜಳ ಕತೆ

*ಡಾ. ಎಸ್. ವಿ. ಪ್ರಭಾವತಿ*

1985ನೇ ಇಸವಿ ಜುಲೈ ತಿಂಗಳ 25ನೇ ತಾರೀಖು - ಶೆಹನಾಜಳ ಜೀವನದಲ್ಲಿ ಅತ್ಯಂತ ಕರಾಳವಾದ ದಿನ. ಕಳೆದ ಏಳು ವರ್ಷಗಳಿಂದ ಕೆಲಸ ಮಾಡಿದ್ದ ಸೌದಿ ಅರೇಬಿಯಾ ವಿಮಾನ ಯಾನ ಸಂಸ್ಥೆಯು ಅವಳನ್ನು ಅಂದು ಕೆಲಸದಿಂದ ಕಿತ್ತು ಹಾಕಿತು. 1978ನೇ ಇಸವಿ ನವೆಂಬರ್ 16ರಂದು ಸ್ಟೇಷನ್ ಮ್ಯಾನೇಜರ್‌ಗೆ ಕಾರ್ಯದರ್ಶಿ ಎಂದು ನೇಮಕಳಾಗಿ ಅತ್ಯಂತ ದಕ್ಷ ಕೆಲಸಗಾರಳೆಂದು ಮೇಲಧಿಕಾರಿಯಿಂದ ಮೆಚ್ಚುಗೆ ಪಡೆದಿದ್ದ ಶಹನಾಜಳ ನೆಮ್ಮದಿ ಅಲ್ಪ ಕಾಲದ್ದಾಗಿತ್ತು. ಏಕೆಂದರೆ 1983ರಲ್ಲಿ ಅವಳ ಮೇಲಧಿಕಾರಿಯಾಗಿ ಬಂದ ಅಬ್ದುಲ್ ಇ ಬಹ್ರಾನಿ ಅವಳನ್ನು ನಾನಾ ರೀತಿಯ ಲೈಂಗಿಕ ಹಿಂಸೆಗಳಿಗೆ ಗುರಿಪಡಿಸಲಾರಂಭಿಸಿದ. ಊಟಕ್ಕೆ ಹೊರಗೆ ಕರೆಯುವುದು, ನಾನಾ ರೀತಿಯ ಭಾವಭಂಗಿಗಳು, ಅವಳು ಯಾವ ಕುಟುಂಬ ನಿಯಂತ್ರಣ ಸಾಧನವನ್ನು ಬಳಸುತ್ತಿದ್ದಾಳೆಂದು ಕೇಳುವುದು, ಮೈ ಮೇಲೆ ಬರುವುದು - ಎಲ್ಲವೂ ಪ್ರಾರಂಭವಾದವು. ಇವಳ ನಿರ್ಲಕ್ಷ್ಯದಿಂದ ಕುಪಿತನಾದ ಬಹ್ರಾನಿ ದ್ವೇಷ ಸಾಧನೆಗೆ ತೊಡಗಿದ. ತನ್ನ ಬಯಕೆಗೆ ಅವಳು ಮಣಿಯದಿದ್ದರೆ ಸೌದಿ ಅರೇಬಿಯಾದಲ್ಲಿರುವ ಅವಳ ಗಂಡನ ಕೆಲಸಕ್ಕೂ ಧಕ್ಕೆ ತರುವೆನೆಂದ.

ಈ ಮಧ್ಯೆ ಸಂಸ್ಥೆಯಲ್ಲಿ ಒಂದು ಮಾರಾಟಗಾರ ಏಜೆಂಟ್ ಹುದ್ದೆ ತೆರವಾಯಿತು. ತನಗಿರುವ ಸೇವಾ ಜೇಷ್ಠತೆಯನ್ನು ಗಮನಿಸಿ ಅದನ್ನು ತನಗೇ ನೀಡಬೇಕೆಂದು ಶೆಹನಾಜ್ ಕೇಳಿಕೊಂಡಳು. ಅದಕ್ಕೆ ಉತ್ತರವಾಗಿ ಮಧ್ಯರಾತ್ರಿ 12 ಗಂಟೆಗೆ ಫೋನ್ ಮಾಡಿ ತನ್ನ ಮನೆಗೆ ಬಂದು ಆ ವಿಷಯ ಚರ್ಚಿಸಬೇಕೆಂದು ಬಹ್ರಾನಿ ಕೇಳಿದ. ಶೆಹನಾಜ್ ನಿರಾಕರಿಸಿದಳು. ದ್ವೇಷ ಸಾಧನೆ ಹೆಚ್ಚಾಯಿತು.

1985 ಜನವರಿ 24ರಂದು ತನ್ನ ರಜೆ ತೀರಿಸಿ ಹಿಂದಿರುಗಿದ ಶೆಹನಾಜಳನ್ನು ಹಾಜರಾತಿ ಪುಸ್ತಕಕ್ಕೆ ಸಹಿ ಮಾಡಗೊಡಲಿಲ್ಲ. ಜನವರಿ 28ರಂದು ಬಹ್ರಾನಿ ಅವಳೊಂದು ಕ್ಷಮಾಯಾಚನೆಯ ಪತ್ರ ಕೊಡಬೇಕೆಂದೂ ತಾನು ಅದನ್ನು ಉಪಯೋಗಿಸುವುದಿಲ್ಲವೆಂದೂ ಹೇಳಿದ. ಎರಡು ಮಕ್ಕಳನ್ನು ಸಾಕಬೇಕಿದ್ದ ಅವಳಿಗೆ ಕೆಲಸದ ಅವಶ್ಯಕತೆಯಿತ್ತು. ಅವಳು ಅಂದು ಬರೆದು ಕೊಟ್ಟ ಪತ್ರವನ್ನು ಮುಂದೆ ಅವಳನ್ನು ಕೆಲಸದಿಂದ ಕಿತ್ತು ಹಾಕುವಾಗ ಅಸ್ತ್ರವಾಗಿ ಬಳಸಲಾಯಿತು. ಆದರೆ ಕುತೂಹಲದ ಸಂಗತಿಯೆಂದರೆ ಮುಂದೆ ವರ್ಷಗಳ ನಂತರ ಇದೇ ಪತ್ರವೇ ಅವಳು ತಪ್ಪಿತಸ್ಥಳಲ್ಲವೆಂದು ಸ್ಪಷ್ಟಪಡಿಸಿತು.

1985 ಫೆಬ್ರವರಿಯಂದು ಅವಳನ್ನು ವಜಾ ಮಾಡಿದ ಪತ್ರ ಬಂತು. ಜೆಡ್ಡಾದಲ್ಲಿರುವ ಅಧಿಕಾರಿಗಳಿಗೆ ಬೇಕಿದ್ದರೆ ದೂರು ಕೊಡುವಂತೆ ಅವಳಿಗೆ ತಿಳಿಸಲಾಯಿತು. ತಾತ್ಕಾಲಿಕವಾಗಿ ಅವಳ ವಜಾ ರದ್ದಾಯಿತು. ಆದರೆ ಜುಲೈ ತಿಂಗಳಲ್ಲಿ ಅವಳಿಗೆ ಅತಿ ಹೆಚ್ಚು ಬೆರಳಚ್ಚಿಸುವ ಕೆಲಸ ಕೊಟ್ಟುದರಿಂದ ಎದೆನೋವು ಕಾಣಿಸಿಕೊಂಡಿತು. ವಿಧಿಯಿಲ್ಲದೆ ಒಂದು ತಿಂಗಳು ರಜೆ ಹಾಕಿ ತನ್ನ ಗಂಡನೊಂದಿಗೆ ಜೆಡ್ಡಾದಲ್ಲಿದ್ದಾಗ ಅಲ್ಲಿಯ ಮೇಲಧಿಕಾರಿಗಳಿಗೆ ಬಹ್ರಾನಿ ವಿರುದ್ಧ ದೂರಿತ್ತಳು. ಹಿಂದಿರುಗಿ ಕೆಲಸಕ್ಕೆ ಬಂದಾಗ ಜುಲೈ 24, 1985ರಿಂದ ಅವಳನ್ನು ಕೆಲಸದಿಂದ ತೆಗೆದು ಹಾಕಿರುವುದಾಗಿ ಸೂಚಿಸಲಾಯಿತು. ಅಷ್ಟೇ ಅಲ್ಲದೆ ಅವಳಿಗೆ ಬೇರೆಲ್ಲೂ ಕೆಲಸ ಸಿಗದಂತೆ ಅಪಪ್ರಚಾರ ಮಾಡಲಾಯಿತು.

ತನಗಿರುವ ಹಕ್ಕುಗಳೇನೆಂದು ತಿಳಿಯದ ಮತ್ತು ಭಾರತದಲ್ಲಿರುವ ವಿದೇಶೀ ಸಂಸ್ಥೆಗಳು ಭಾರತದ ಕಾರ್ಮಿಕ ನೀತಿಯನ್ನು ಪಾಲಿಸಬೇಕೆಂಬುದನ್ನು ತಿಳಿಯದ ಶೆಹನಾಜ್ ಒಬ್ಬ ಸ್ನೇಹಿತೆಯ ಸಲಹೆಯಂತೆ ಲೇಬರ್ ಕೋರ್ಟ್‌ನ ಮೊರೆ ಹೊಕ್ಕಳು. ಷೋಕಾಸ್ ನೋಟೀಸ್ ಕೊಡದೇ ಏಕ್‌ದಂ ಕೆಲಸದಿಂದ ವಜಾ ಮಾಡಿದ್ದ ಅಂಶವೇ ಶೆಹನಾಜಳ ಪರವಾದ ಗಟ್ಟಿ ಅಂಶವಾಗಿತ್ತು. ಆದರೆ ಶೆಹನಾಜಳಂತೆ ಇನ್ನೂ ಕೆಲವು ಹೆಂಗಸರನ್ನು ಕೆಲಸಗಾರರಾಗಿ ಹೊಂದಿರುವ ತನ್ನ ಸಂಸ್ಥೆಯು ಬೇರೆ ಯಾರಿಂದಲೂ ಇಂತಹ ಲೈಂಗಿಕ ಶೋಷಣೆಯ ವಿರುದ್ಧ ದೂರು ಪಡೆದಿಲ್ಲದಿರುವುದರಿಂದ ಅವಳು ಸುಳ್ಳು ಹೇಳುತ್ತಿರುವಳೆಂದು ಸೌದಿ ಅರೇಬಿಯಾ ವಿಮಾನ ಸಂಸ್ಥೆ ವಾದಿಸಿತು. ಆದರೆ ಅದು ನಿಲ್ಲಲಿಲ್ಲ. ಶೆಹನಾಜಳಿಂದ ಬಹ್ರಾನಿ ಪಡೆದಿದ್ದ ಕ್ಷಮಾಯಾಚನೆಯ ಪತ್ರವೇ ಅವನ ವಿರುದ್ಧ ಸಾಕ್ಷಿ ನೀಡಿತು.

1985ನೇ ಇಸವಿ ಜುಲೈ ತಿಂಗಳ 25ನೇ ತಾರೀಖಿನಿಂದ ಹಿಡಿದು ಇಂದಿನವರೆಗಿನ (1996 ಆಗಸ್ಟ್) ಅವಳ ಪೂರ್ಣ

ವೇತನವನ್ನು ಕೊಟ್ಟು ಅವಳನ್ನು ಕೆಲಸಕ್ಕೆ ಹಿಂತೆಗೆದುಕೊಳ್ಳಬೇಕೆಂದು ಲೇಬರ್ ಕೋರ್ಟು ತೀರ್ಪಿತ್ತಿತು. ಇದುವರೆಗಿನ ಚರಿತ್ರೆಯಲ್ಲಿ ಲೈಂಗಿಕ ಹಿಂಸೆಯ ವಿರುದ್ಧ ಎತ್ತಿದ ಧ್ವನಿ ಇದಾಗಿದ್ದು ಇದರ ವಿಷಯವೆಂದರೆ, ಲೈಂಗಿಕ ಕಿರುಕುಳ ಅನುಭವಿಸುತ್ತಿರುವ ಎಲ್ಲಾ ಮಹಿಳೆಯರ ಆಶಾಕಿರಣವೆಂದಾಯಿತು. ಶೆಹನಾಜಳ ಈ ಕತೆ ಹೊಸದಲ್ಲ, ಇದರ ಅಂತ್ಯ ಮಾತ್ರ ಹೊಸತು.

ಮುಂದೆ ಇಂತಹ ಕಿರುಕುಳ ಅನುಭವಿಸುವ ಮಹಿಳೆಯರು ಅದರ ವಿರುದ್ಧ ಧ್ವನಿ ಎತ್ತಬಹುದೆನ್ನುವ ಭರವಸೆಯನ್ನು ನನ್ನ ಈ ಕತೆ ಅವರಿಗೆ ಕೊಟ್ಟರೆ ನನ್ನ ಹೋರಾಟ ಸಾರ್ಥಕ ಎನ್ನುತ್ತಾಳೆ ಶಹನಾಜ್.

## ಓದುಗರಿಗೊಂದು ಮನವಿ

ಕಳೆದ ಹತ್ತು ವರ್ಷಗಳಿಂದ ಮಾನಸ ತಿಂಗಳ ಪತ್ರಿಕೆಯನ್ನು ಓದುಗರ ಹಾಗೂ ಸಹೃದಯರ ಸಹಕಾರದಿಂದ ಪ್ರಕಟಿಸುತ್ತಿದ್ದೇವೆ. ಯಾವುದೇ ಸಂಸ್ಥೆಯ ಹಾಗೂ ಸರ್ಕಾರದ ನೆರವಿಲ್ಲದೆ, ಸ್ವಾಯತ್ತವಾಗಿ ಮಹಿಳೆಯರೇ ಮಾನಸ ಪತ್ರಿಕೆಯನ್ನು ಪ್ರಕಟಿಸುತ್ತಿದ್ದೇವೆ.

ಕರ್ನಾಟಕದ ಮಹಿಳಾ ಚಳುವಳಿಯಲ್ಲಿ ಮಾನಸದಂತಹ ಪತ್ರಿಕೆಯ ಪಾತ್ರ ಮಹತ್ತರವಾದುದೆಂದು ನಾವು ನಂಬಿದ್ದೇವೆ. ನಮ್ಮ ಈ ನಂಬಿಕೆಗೆ ಕಳೆದ ಹತ್ತು ವರ್ಷಗಳಿಂದ ನೀರೆರೆದು ಪೋಷಿಸಿದವರು ನೀವು. ಆದರೆ ಮಾನಸ ಪ್ರಕಟಣೆಯ ಹಾದಿ ಸುಗಮವಾದುದೇನಲ್ಲ. ಪ್ರತಿ ವರ್ಷವೂ, ಗೊಂದಲ, ಹತಾಷೆ, ಅಧೈರ್ಯದ ಸ್ಥಿತಿಯಲ್ಲಿಯೇ ಮಾನಸವನ್ನು ಪ್ರಕಟಿಸುತ್ತಾ ಬಂದಿದ್ದೇವೆ.

ಮಾನಸದ ಪ್ರಕಟಣೆಯಲ್ಲಿ ಎದುರಾಗುವ ದೊಡ್ಡ ಸಮಸ್ಯೆ ಹಣಕಾಸಿನದು. ಮಾನಸಕ್ಕೆ ಯಾವುದೇ ಸ್ಥಾಯಿ ನಿಧಿ ಇಲ್ಲ. ಖಾಯಂ ಆದ ಸಾಂಸ್ಥಿಕ ರಚನೆಯ ಬಗ್ಗೆ ಹಾಗೂ ಖಾಯಂ ಆದ ಸ್ಥಾಯಿ ನಿಧಿಯ ಬಗ್ಗೆ ನಮಗೆ ಹಲವಾರು ಪ್ರಶ್ನೆಗಳಿರುವುದರಿಂದ ಆ ಬಗ್ಗೆ ಹೆಚ್ಚಿನ ಗಮನವನ್ನು ನೀಡಲಾಗಿಲ್ಲ. ಮಾನಸದ ಒಂದು ಸಂಚಿಕೆಗೆ ಸುಮಾರು 3,000ರೂಗಳಾಗುತ್ತದೆ. ಪ್ರತಿ ಸಂಚಿಕೆಗೂ ಚಂದಾ, ಹಾಗೂ ಕೊಡುಗೆ ಹಣದಿಂದ ಪತ್ರಿಕೆಯನ್ನು ಪ್ರಕಟಿಸಲಾಗುವುದು. ಕಾಳಜಿಯುಳ್ಳ ಸಹೃದಯರು ಹಾಗೂ ಗೆಳತಿಯರು ಪ್ರತಿ ತಿಂಗಳೂ ಶಕ್ತ್ಯಾನುಸಾರ ಆರ್ಥಿಕ ನೆರವು ನೀಡುತ್ತಿದ್ದಾರೆ. ಆದರೆ ಪ್ರತಿ ಸಂಚಿಕೆಗೂ ಹಣ ಸಂಗ್ರಹಿಸಿ ಪತ್ರಿಕೆಯನ್ನು ಪ್ರಕಟಿಸುವುದು ಕಷ್ಟಕರವಾದುದರಿಂದ ಒಂದು ವರ್ಷದ ಸಂಚಿಕೆಗಳ ಪ್ರಕಟಣೆಗೆ ನೆರವಾಗುವಂತೆ ಹಣವನ್ನು ಸಂಗ್ರಹಿಸುವ ಉದ್ದೇಶದಿಂದ ನಮ್ಮ ಈ ಆಲೋಚನೆಯನ್ನು ತಮ್ಮ ಮುಂದಿಡುತ್ತಿದ್ದೇವೆ.

ವರ್ಷಕ್ಕೊಮ್ಮೆ (ಪ್ರತಿ ವರ್ಷವೂ) ಪತ್ರಿಕೆಗೆ 200-00ರೂ ಅಥವಾ 100/-ರೂಗಳನ್ನು ಕೊಡುಗೆಯಾಗಿ ನೀಡಬೇಕೆಂದು ತಮ್ಮನ್ನು ಕೋರುತ್ತೇವೆ. 25/- ರೂ. ಅಥವಾ 50/- ರೂಗಳನ್ನು ನೀಡಬಯಸುವವರು ಪ್ರತಿ ತಿಂಗಳೂ ಕಳಿಸಿ ಕೊಡಬಹುದು. ಇದುವರೆಗೆ ಮಾನಸ ಪತ್ರಿಕೆಯ ಪ್ರಕಟಣೆಗೆ ನೀರೆರೆದ ಸಹೃದಯರು ಮಾನಸವನ್ನು ಉಳಿಸಿ ಬೆಳೆಸುವಲ್ಲಿ ನೆರವಾಗಬೇಕೆಂದು ಕಳಕಳಿಯಿಂದ ವಿನಂತಿಸಿಕೊಳ್ಳುತ್ತೇವೆ. ನೀವು ನೀಡುವ ಈ ಕೊಡುಗೆ ಪತ್ರಿಕೆಯ ಪ್ರಕಟಣೆಗೆ ನೆರವಾಗುವುದಲ್ಲದೆ, ಮಾನಸದ ಇತರ ಚಟುವಟಿಕೆಗಳಿಗೂ ನೆರವಾಗುತ್ತದೆ.

ಹಣವನ್ನು "ಮಾನಸ ತಿಂಗಳ ಪತ್ರಿಕೆ" ಹೆಸರಿನಲ್ಲಿ ಎಂ.ಓ. ಅಥವಾ ಡಿ.ಡಿ. ಮೂಲಕ ಕಳಿಸಿ ಕೊಡಬಹುದು. ಮಾನಸ ಬೆಳೆಯಬೇಕಾಗಿರುವುದು ಮುಖ್ಯವಾಗಿ ಓದುಗರಿಂದ. ಆದ್ದರಿಂದ ತಪ್ಪದೆ, ತಮ್ಮ ಸ್ನೇಹಿತರನ್ನು ಪರಿಚಿತರನ್ನು ಚಂದಾದಾರರನ್ನಾಗಿಸಿ.

*- ಸಂಪಾದಕ ಮಂಡಲಿ*

# ವಿಚ್ಛೇದನ : ಒಂದು ಚರಿತ್ರಾರ್ಹ ತೀರ್ಪು

ಭಾರತೀಯ ವಿಚ್ಛೇದನ ಕಾಯಿದೆಯ 10ನೇ ಪರಿಚ್ಛೇದವನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ, ವೈವಾಹಿಕ ಪರಿಹಾರವನ್ನು ಕೇಳುವ ಗಂಡು ಮತ್ತು ಹೆಣ್ಣಿನ ಮಧ್ಯ ಅಸ್ತಿತ್ವದಲ್ಲಿರುವ ಅಗಾಧವಾದ ತಾರತಮ್ಯವನ್ನು ನೋಡಬಹುದು. ಗಂಡಸರು ಹೆಂಡತಿಯರಿಂದ ವಿಚ್ಛೇದ ಪಡೆಯಬೇಕಾದರೆ, ಅವರು ಹೆಂಗಸರ ಅನೈತಿಕ ಸಂಬಂಧವನ್ನು ಸಾಬೀತು ಪಡಿಸಿದರೆ ಸಾಕು. ಆದರೆ ಹೆಂಡತಿಯಾದವಳು ಗಂಡನಿಂದ ವಿಚ್ಛೇದನ ಪಡೆಯಬೇಕೆಂದರೆ ಆಕೆ ಗಂಡನ ಅನೈತಿಕ ಸಂಬಂಧದೊಡನೆ ಹೆಂಡತಿಯ ಮೇಲೆ ನಡೆಸಿದ ಕ್ರೂರ ನಡವಳಿಕೆಯನ್ನು ಸಾಬೀತು ಪಡಿಸಬೇಕು. ಜೊತೆಯಲ್ಲಿ ಆತ ಹೆಂಡತಿಯನ್ನು ತೊರೆದು ದೂರವಿರಬೇಕು.

ಕ್ರಿಶ್ಚಿಯನ್ ಧರ್ಮಕ್ಕೆ ಸೇರಿದ್ದ ಮಹಿಳೆ ಗಂಡನಿಂದ ವಿಚ್ಛೇದನ ಪಡೆಯಬೇಕೆಂದರೆ, ಆಕೆ ಗಂಡನ ಅನೈತಿಕ ಸಂಬಂಧ, ತನ್ನ ಮೇಲೆ ನಡೆಸುತ್ತಿರುವ ಹಿಂಸೆ ಹಾಗೂ ಹೆಂಡತಿಯನ್ನು ತೊರೆದಿರುವುದು, ಈ ಮೂರು ಅಂಶಗಳನ್ನು ಸಾಬೀತು ಪಡಿಸುವುದು ಅನಿವಾರ್ಯವಾಗುತ್ತದೆ. ಈ ಮೂಲಕ ಕಾನೂನು ಅವಳಿಗೆ ಬಲಹೀನ ಅಸ್ತ್ರವನ್ನು ನೀಡಿದಂತಾಗಿದೆ. ಇಂದಿನ ಭಾರತೀಯ ಸಾಂಸ್ಕೃತಿಕ ವಾತಾವರಣದಲ್ಲಿ ಮಹಿಳೆಯರು ಗಂಡಸರ ಅನೈತಿಕ ಲೈಂಗಿಕ ಸಂಬಂಧವನ್ನು ಸಾಬೀತು ಪಡಿಸುವುದು ಕಷ್ಟ ಸಾಧ್ಯ. ಇತ್ತೀಚೆಗೆ ಕೇರಳಾ ಹೈಕೋರ್ಟ್ ನೀಡಿದ ತೀರ್ಪು, ಗಂಡು ಹೆಣ್ಣಿನ ನಡುವಿರುವ ತಾರತಮ್ಯವನ್ನು ತೆಗೆದು ಹಾಕುವಲ್ಲಿ ಒಂದು ಮೈಲಿಗಲ್ಲಾಗಿದೆ. ಕೇರಳಾ ಹೈಕೋರ್ಟ್ ಭಾರತೀಯ ವಿಚ್ಛೇದನಾ ಕಾಯ್ದೆಯ 10ನೇ ಪರಿಚ್ಛೇದದಲ್ಲಿ ಬದಲಾವಣೆಯನ್ನು ತಂದಿದೆ. ಈ ಬದಲಾವಣೆಯಿಂದಾಗಿ ಇಂದು ಕ್ರಿಶ್ಚಿಯನ್ ಮಹಿಳೆ ಗಂಡನ ಅನೈತಿಕ ಸಂಬಂಧವನ್ನೂ ಸಾಬೀತು ಪಡಿಸುವ ಗೋಜಿಗೆ ಹೋಗದೆ, ಹಿಂಸೆ ಮತ್ತು ಪರಿತ್ಯಾಗ ಈ ಕಾರಣಗಳಿಂದಾಗಿ ವಿಚ್ಛೇದನವನ್ನು ಪಡೆಯಬಹುದಾಗಿದೆ.

1988ರಲ್ಲಿ ಮೇರಿ ನೋಸಿಯಾ ಹಾಗೂ 1991ರಲ್ಲಿ ಅಮ್ಮಿಣಿಯವರು ಕೋರ್ಟ್‌ಗೆ ಸಲ್ಲಿಸಿದ ಮನವಿಯಿಂದಾಗಿ ಹೈಕೋರ್ಟ್ ಗಮನಾರ್ಹವಾದ ತೀರ್ಪನ್ನು ನೀಡಿದೆ.

ಮೇರಿ ಜಕಾರಿಯಾ ಸಿರಿಯನ್ ಕ್ರಿಶ್ಚಿಯನ್ ಕೊಟ್ಟಾಯಂ ಸ್ಕೂಲೊಂದರಲ್ಲಿ ಸಹಾಯಕ ವಾರ್ಡನ್‌ಳಾಗಿದ್ದ ಈಕೆ 1972ರಲ್ಲಿ ಪಿ. ಸಿ. ಜಕಾರಿಯಾ ಎಂಬವರೊಂದಿಗೆ ಮದುವೆಯಾದಳು. ಈ ದಂಪತಿಗಳಿಗೆ ಮಗಳೂ ಸಹ ಇದ್ದಳು. 1977ರ ನಂತರ ಆಕೆಯ ಗಂಡ ಹೆಂಡತಿ ಮಕ್ಕಳನ್ನು ತೊರೆದು ನೈರೋಬಿಗೆ ಹೊರಟು ಹೋದದ್ದಲ್ಲದೆ, ಇಂಗ್ಲೀಷ್ ಹೆಂಗಸಿನೊಂದಿಗೆ ವಾಸಿಸಲು ತೊಡಗಿದ. ಗಂಡ ಎಲ್ಲಿದ್ದಾನೆ ಎಂಬ ಸುಳಿವೂ ಸಹ ಮೇರಿಗೆ ದೊರೆಯಲಿಲ್ಲ. ಆಕೆ ನ್ಯಾಯಾಲಯದ ಮೊರೆ ಹೋಗುವುದು ಅನಿವಾರ್ಯವಾಯಿತು.

ಅಮ್ಮಿಣಿ ಸರ್ಕಾರಿ ಹೈಸ್ಕೂಲೊಂದರಲ್ಲಿ ಸಹ ಉಪಾಧ್ಯಾಯನಿ, 1980ರಲ್ಲಿ ಕ್ರಿಶ್ಚಿಯನ್ ವಿಧಿಯ ಪ್ರಕಾರ ವಿವಾಹವಾದಳು. ವಿವಾಹ ಅವಳ ಪಾಲಿಗೆ ಮುಳ್ಳಿನ ಹಾಸಿಗೆಯಾಯಿತು. ಮದುವೆಯಾದ ಪ್ರಾರಂಭದಿಂದಲೇ ಅಮಾನುಷವಾದ ಚಿತ್ರ ಹಿಂಸೆಗೆ ಗುರಿಮಾಡುತ್ತಿದ್ದ. 1981ರಲ್ಲಿ ಆಕೆಯನ್ನು ಸಂಪೂರ್ಣವಾಗಿ ತೊರೆದು ಹೊರಟು ಹೋದ. ಅಮ್ಮಿಣಿ ನ್ಯಾಯಕ್ಕಾಗಿ ಮೊರೆ ಹೋದಳು.

ಮೇರಿ ಜಕಾರಿಯಾ ಹಾಗೂ ಅಮ್ಮಿಣಿ ಭಾರತೀಯ ವಿಚ್ಛೇದನ ಕಾಯಿದೆಯ 10ನೇ ವಿಭಾಗ ನಿರಂಕುಶವಾದುದು. ಅಧಿಕಾರಯುಕ್ತವಾದುದೆಂದು, ಅದು ಸಂವಿಧಾನ ನೀಡಲಾದ ಮೂಲಭೂತ ಹಕ್ಕಿನ ಉಲ್ಲಂಘನೆಯಾಗಿದೆಯೆಂದು ತಮ್ಮ ಅರ್ಜಿಯಲ್ಲಿ ವಾದಿಸಿದರು. ಸ್ತ್ರೀಯರು ವಿಚ್ಛೇಧನ ಪಡೆಯಬೇಕಾದರೆ ಗಂಡನ ಅನೈತಿಕ ಲೈಂಗಿಕ ಸಂಬಂಧವನ್ನು ಸಾಬೀತುಗೊಳಿಸುವುದು ಅತಿಮುಖ್ಯವಾದ ಆಧಾರವನ್ನಾಗಿಸಿ, ಹಿಂಸೆ ಮತ್ತು ಪರಿತ್ಯಾಗವನ್ನು ವಿಚ್ಛೇದನ ಪಡೆಯಲು ಬೇಕು. ಮುಖ್ಯ ಕಾರಣಗಳ ಹಿಂದಿರುವ ಮೂಲಭೂತ ತಾರತಮ್ಯ ಧೋರಣೆಯನ್ನು ಇವರು ತಮ್ಮ ಮನವಿಯಲ್ಲಿ ಎತ್ತಿ ತೋರಿಸಿದರು.

ಆರ್ಥಿಕ, ಸಾಂಸ್ಕೃತಿಕ, ಸಾಮಾಜಿಕ ವಲಯದಲ್ಲಿ ಹಲವಾರು ರೀತಿಯ ಬದಲಾವಣೆಗಳಾಗಿದ್ದರೂ 1857ರಲ್ಲಿ ರಚಿತವಾದ ಕಾನೂನು ಮಾತ್ರ ಅದೇ ಸ್ವರೂಪದಲ್ಲಿ ಜಾರಿಯಲ್ಲಿದೆ. ಕ್ರಿಶ್ಚಿಯನ್ ಧರ್ಮದಲ್ಲಿ ಪ್ರಚಲಿತದಲ್ಲಿರುವ ವಿವಾಹ ಮತ್ತು ವಿಚ್ಛೇದನಕ್ಕೆ ಸಂಬಂಧಪಟ್ಟ ಹಾಗೆ ಲಾ ಕಮೀಶನ್ ಹಲವಾರು ಬಾರಿ ತನ್ನ ಸಲಹೆಗಳನ್ನು ನೀಡಿದ್ದರೂ ಸರ್ಕಾರ ಅದೇ ಸಮುದಾಯದಿಂದ ಬಂದ ಒತ್ತಡದಿಂದಾಗಿ, ಲಾ ಕಮಿಶನ್ ನೀಡಿದ ಸಲಹೆಗಳಿಗೆ ಕಿವಿಗೊಡಲಿಲ್ಲ. ಜೊತೆಗೆ

ಕ್ರಿಶ್ಚಿಯನ್ ಸಮುದಾಯದ ವೈಯಕ್ತಿಕ ಕಾನೂನಿಗೆ ಸಂಬಂಧ ಪಟ್ಟ ಹಲವಾರು ಬಿಲ್ಲುಗಳು ಸಂಸತ್ತಿನಲ್ಲಿ ಇರುವುದರಿಂದ ಸಂಬಂಧಪಟ್ಟಂತೆ ತೀರ್ಪು ನೀಡುವುದು ಅಸಮಂಜಸ ಎಂದು ಭಾವಿಸಲಾಯಿತು.

ನ್ಯಾಯಧೀಶ K. T. ಥಾಮಸ್ ಭಾರತಕ್ಕೆ ಸ್ವಾತಂತ್ರ್ಯ ಬಂದ ನಂತರ ಹಿಂದೂ, ಪಾರ್ಸಿ ಮುಂತಾದವರಲ್ಲಿ ವಿಚ್ಛೇದನಕ್ಕೆ ಅಗತ್ಯವಾದ ವಾಸ್ತವಾಂಶವುಳ್ಳ ಕಾರಣಗಳನ್ನು ಸೇರಿಸಿದೆ. ಆದರೆ ಕ್ರಿಶ್ಚಿಯನ್ ವೈಯಕ್ತಿಕ ಕಾನೂನಿಗೆ ಅನ್ವಯವಾಗುವ ಕಾರಣಗಳು ಅವಾಸ್ತವಿಕತೆಯಿಂದ ಕೂಡಿದೆಯೆನ್ನುತ್ತಾರೆ. ನ್ಯಾಯಾಧೀಶ ರಾಮಕೃಷ್ಣ ಸಹ, ತಾರತಮ್ಯದಿಂದ ಕೂಡಿದ ವಿಚ್ಛೇದನ ಕಾನೂನಿನ 10ನೇ ವಿಭಾಗವನ್ನು ತೆಗೆದು ಹಾಕಬೇಕೆಂದು ವಾದಿಸುತ್ತಾರೆ. ಈ ರೀತಿಯಾಗಿ ಕೇರಳಾ ಹೈಕೋರ್ಟ್ ಚರಿತ್ರಾರ್ಹವಾದ ತೀರ್ಪನ್ನು ನೀಡಿದೆ. ಇದು ವಿಚ್ಛೇದನಕ್ಕಾಗಿ ನ್ಯಾಯಾಲಯದ ಮೊರೆಹೊಕ್ಕ ಕ್ರಿಶ್ಚಿಯನ್ ಮಹಿಳೆಯರ ಸಶಕ್ತತೆಯ ರಕ್ಷಣೆಗೆ ಬಲ ನೀಡಿದಂತಾಗಿದೆ.

●

ಕವನ

## ಹೂವು-ಹೆಣ್ಣು-ತಾರೆ

*ವಜ್ರಾ ಪಾಟೀಲ್*

ನಾವು ಮೂವರು ತ್ರಿವಳಿಗಳಲ್ಲವೆ?
ಅನ್ಯರಿಗೆ ಅಡಿಯಾಗಿ, ಸಂಗಾತಿಯಾಗಿ
ಸಿಡಿದು ದೂರಾಗಿ ದಿಕ್ಕುದಿಕ್ಕುಗಳಂಚಲಿ
ನಿಂತ ವಿರಹಿಗಳಲ್ಲವೆ?

**ಹೂವು -**
ನಾ ಅರಳುವಾಗ ನೂರಾಸೆ
ನನ್ನೊಡನೆ ಅರಳುತ್ತದೆ.
ನಾ ಮುತ್ತೈದೆಯ ಮುಡಿಯೇರಬೇಕು
ಗುಡಿಯೊಳಗಿರುವವನ ಶಿರ
ನನ್ನ ಧರಿಸಬೇಕು
ಪ್ರೇಮಿಗಳ ಮಧ್ಯೆ ದೂತನಾಗಬೇಕು
ಏನೆಲ್ಲಾ ಬೇಕುಗಳ ಮಧ್ಯೆಯೂ
ನನಗೆ ನಿರಾಸೆ. ನಿಜವಾಗಿ ಬೇಕಾಗಿದ್ದು
ನನ್ನನರಿಯುವ ಹೃದಯ.

**ಹೆಣ್ಣು**
ಸೃಷ್ಟಿಯನೆ ಹೊಟ್ಟೆಯಲಿ ಇಟ್ಟು
ಪೋಷಿಸಿದಳು ದೀಪವಾಗಿ ಎಲ್ಲೆಲ್ಲೂ
ಬೆಳಕು ಚೆಲ್ಲಿದವಳು ನಲ್ಲೆಯಾಗವನ
ಮನವ ತುಂಬಿದವಳು ಆದರೀಗ ನೋಡು !
ಪಥ ತಪ್ಪಿದ ಕುದುರೆಯಂತೆ
ಅತ್ತಿತ್ತ ಅಲೆಯುತಿರುವೆ
ನನ್ನೊಳಗನೇ ಸುಟ್ಟು
ಬೂದಿಯೊಳಗೆ ಮುಟ್ಟಿದ್ದು
ನನ್ನ ಸುಖದ ಭ್ರಮೆಯಾಗಿ ಬಿಟ್ಟೆ
ನನಗೀಗ ಭ್ರಮೆ ಬೇಡ. ವಾಸ್ತವಬೇಕು
ಸ್ಫೂರ್ತಿ ಸ್ಫುರಿಸುವ ಪ್ರೀತಿ ಬೇಕು

**ತಾರೆ -**
ನನಗಿಲ್ಲ ಸ್ಥೈರವುಂಟು. ಆಕ್ಷೇಪಣೆಯಿಲ್ಲ
ದಿನವೆಲ್ಲಾ ಸುಖದ ಅಮಲು
ಗುರಿಯಿಲ್ಲದಾ ಬದುಕು
ಅಂಬರದ ಅನಂತದಲಿ ನೂರಾರು
ಸ್ನೇಹಿತರು ತೋರಿಕೆಯ ನಗು
ನನಗಿಲ್ಲ ಕೊರತೆ ಏನು?
ನನ್ನ ಬಯಕೆ - ನನ್ನನ್ನು ಕಿತ್ತು
ತಿನ್ನುತ್ತಿರುವ ಈ ಒಂಟಿತನ
ನೀಗಿಸುವ ಸಂಗಾತಿ.
ನಾವೀಗ ಸೇರಿದ್ದೇವೆ
ಅತ್ತಿತ್ತು ಹೃದಯದೊಡನೆ
ನೆಲದ ಒಡಲಿನೊಡನೆ
ಆ ದೀರ್ಘ ಕಾಲದ ಈ ಕ್ಷಣ ತುಂಬಿದೆ
ನಾವೀಗ ಒಂದೇ
ದಾರಿಯ ಪಯಣಿಗರೆ?!!

●

# ನವೆಂಬರ್ ೨೩ರಂದು ಮಂಗಳೂರಿನಲ್ಲಿ ನಡೆದ ನಾಲ್ಕನೇ ಲೇಖಕಿಯರ ಸಮ್ಮೇಳನ

ಲೇಖಕಿಯರಿಗೊಂದು ಪ್ರತ್ಯೇಕ ಸಂಘ ಬೇಕೇ, ಸಮ್ಮೇಳನ ಬೇಕೇ ಎಂದು ಹುಬ್ಬೇರಿಸುವವರ, ಪ್ರಶ್ನಿಸುವವರ ನಡುವೆಯೇ ಹುಟ್ಟಿದ ಕರ್ನಾಟಕ ಲೇಖಕಿಯರ ಸಂಘವು ಮಂಗಳಾಂಗಿಯ ಬೀಡಾದ ಮಂಗಳೂರಿನಲ್ಲಿ ತನ್ನ ೪ನೇ ಸಮ್ಮೇಳನ ನಡೆಸಿತು. ತಮಿಳಿನ ಪ್ರಖ್ಯಾತ ಲೇಖಕಿಯಾದ ಶ್ರೀಮತಿ ರಾಜಾ ಕೃಷ್ಣನ್ ವಿಶೇಷ ಅತಿಥಿಯಾಗಿ ಆಗಮಿಸಿದ್ದರು. 'ಲೇಖಕಿ'ಯ ವಿಶೇಷ ಸಂಚಿಕೆ ಮತ್ತು 'ರಂಗಲೇಖಕಿ' ಬಿಡುಗಡೆಯಾದವು. ವೀರಪ್ಪ ಮೊಯಿಲಿ ಉದ್ಘಾಟಿಸುತ್ತಾ ಅನೇಕ ಉತ್ಪ್ರೇಕ್ಷೆಗಳಿಂದ ಕೂಡಿದ್ದರೂ, ಪುರುಷರಿಗೆ ಸಮಾನವಾಗಬೇಕೆಂಬ ಬಯಕೆಯಿಂದ ಪ್ರಾರಂಭವಾದ ಮಹಿಳಾ ಸಾಹಿತ್ಯ ಆ ಗುರಿ ಮೀರಿ ಮುನ್ನಡೆದಿದೆ ಅಂದರು. ಸಮ್ಮೇಳನಾಧ್ಯಕ್ಷೆ ಹಿರಿಯ ಲೇಖಕಿ ಹೆಚ್. ಎಸ್. ಪಾರ್ವತಿ ವೇದಗಳಿಂದ ಹಿಡಿದು ಇಂದಿನ ಜೀತ ಪದ್ಧತಿಯವರೆಗೆ ಮಹಿಳೆಯ ಸ್ಥಿತಿಗತಿಯನ್ನು ವಿಶ್ಲೇಷಿಸಿ ಮಾತನಾಡಿದರು. ಇಂಗ್ಲಿಷ್ ಪತ್ರಿಕೆಯೊಂದರ ಆಧಾರದ ಮೇಲೆ ಅವರು ನೀಡಿದ ಅಂಕಿ ಅಂಶಗಳು ಇಡೀ ಜಗತ್ತಿನಲ್ಲಿ ಮಹಿಳೆಯ ಮೇಲೆ ನಡೆಯುವ ದೌರ್ಜನ್ಯ ತಾರತಮ್ಯ ಭಾವನೆಗಳನ್ನು ಹೇಳಿ ದಂಗು ಬಡಿಸಿದವು, ಮಹಿಳಾ ಸಾಹಿತ್ಯದ ಬಗ್ಗೆ ಈಗಲೂ ವಿಮರ್ಶಕರಿಗಿರುವ ತಾತ್ಸಾರದ ಬಗ್ಗೆ, ಅದನ್ನು 'ಅಡಿಗೆ ಮನೆ ಸಾಹಿತ್ಯ' ಎಂದು ಹೀಯಾಳಿಸುವುದರ ಬಗ್ಗೆ ಕೆಂಡಕಾರಿದರು.

'ಇತ್ತೀಚಿನ ಮಹಿಳಾ ಸಾಹಿತ್ಯದ ನೆಲೆಗಳು' ಎಂಬ ಮೊದಲ ಗೋಷ್ಠಿಯಲ್ಲಿ ಕಾದಂಬರಿ, ಕಾವ್ಯ, ವಿಚಾರ ಸಾಹಿತ್ಯ ಮತ್ತು ಸಣ್ಣ ಕತೆ - ಎಂಬ ಪ್ರಕಾರಗಳ ಬಗ್ಗೆ ನಾಲ್ಕು ಮಂದಿ ಪ್ರಬಂಧಗಳನ್ನು ಮಂಡಿಸಿದರು. ವಿಪುಲ ಸಂಖ್ಯೆಯ ಕವನಗಳಲ್ಲಿ ಕಂಡುಬರುವ ಪ್ರತಿಭಟನೆ ಮತ್ತು ಸ್ತ್ರೀವಾದೀ ನೆಲೆಗಳನ್ನು ಗುರುತಿಸಿದರು. ಕವನಗಳ ಬಗ್ಗೆ ಮಾತನಾಡಿದ ಹೇಮಾ ಪಟ್ಟಣಶೆಟ್ಟಿ, ಸ್ವಾತಂತ್ರ್ಯ ಸಮಾನತೆಯ ಅಭಿವ್ಯಕ್ತಿ ಮತ್ತು ಸಿದ್ಧಮಾದರಿಗಳಿಂದ ಮುಕ್ತಿ, ಬೇಗುದಿಯಿಂದ ಪಡೆದ ಚಾಲನೆ, ಪರಂಪರೆಯ ನಿರಾಕರಣೆಗಳ ಬಗ್ಗೆ ಮಾತನಾಡಿದರು. ವಿಚಾರ ಸಾಹಿತ್ಯದ ಬಗ್ಗೆ ಮಾತನಾಡಿದ ಉಷಾ ಪಿ. ರೈ. ಸಂಶೋಧನೆ, ವಿಮರ್ಶೆ ಮತ್ತು ಪ್ರಬಂಧ ಎಂಬ ಮೂರು ಮಜಲುಗಳಲ್ಲಿ ಉದ್ವೇಗಕ್ಕೆ ತೆರೆದುಕೊಂಡ ಜೀವನದರ್ಶನ, ವಿಜ್ಞಾನ, ನಾಗರಿಕತೆಯೊಡಗೂಡಿ ಮಧ್ಯಮ ವರ್ಗ ಸ್ತ್ರೀವಾದಕ್ಕೆ ಆತುಕೊಂಡಿತು ಅಂದರು. ಸಣ್ಣಕತೆಗಳ ಬಗ್ಗೆ ಮಾತನಾಡಿದ ಮಂಗಳಾ ಪ್ರಿಯದರ್ಶಿನಿ, ಏನು ಹೇಳಬೇಕೆಂಬುದಕ್ಕಿಂತ ಹೇಗೆ ಹೇಳಬೇಕೆಂಬುದೇ ಮುಖ್ಯವಾಗಿ ರಾಚನಿಕ ನಿಲುವಿಗೆ ಬದ್ಧರಾದವರ ಬಗ್ಗೆ, ವೈಯಕ್ತಿಕ ಛಾಪನ್ನು ಒತ್ತಿರುವ ಹೊಸ ಬರಹಗಾರ್ತಿಯರ ಬಗ್ಗೆ ಹೇಳಿದರು. ಕಾದಂಬರಿ ಬಗ್ಗೆ ನಾಗಭೂಷಣ ಅವರ ಪ್ರಬಂಧವನ್ನು ಓದಲಾಯಿತು. ಇತ್ತೀಚೆಗೆ ಯಾರೂ ಹೊಸಬರು ಕಾದಂಬರಿ ಬರದೇ ಇಲ್ಲವೆಂದು(!?) ಅವರು ಹಳಬರ ಹೊಸ ಕಾದಂಬರಿಗಳ ಬಗ್ಗೆಯೇ ಮಾತನಾಡಿದರು.

"ಸ್ವಾತಂತ್ರ್ಯೋತ್ತರ ಮಹಿಳೆ - ಅವಕಾಶಗಳು - ಆತಂಕಗಳು" ಎಂಬ ಎರಡನೆಯ ಗೋಷ್ಠಿ ಎತ್ತಿಟ್ಟ ಚರ್ಚೆಯಿಂದಾಗಿ ಮಹತ್ವದ್ದಾಯಿತು. ಪರಿಸರವಾದಿ ಡಾ. ಕುಸುಮಾ ಸೊರಬ, ಪರಿಸರ ವಾದದ ಬಗ್ಗೆ ತೀವ್ರ ಕಳಕಳಿ ವ್ಯಕ್ತಪಡಿಸಿದರು. ಮಹಿಳೆ ಮತ್ತು ರಾಜಕೀಯ ಎಂಬ ವಿಷಯದ ಬಗ್ಗೆ ಮಾತನಾಡಿದ ಮಲ್ಲಿಕಾ ಘಂಟಿ ಒಬ್ಬ ಕಿತ್ತೂರು ಚೆನ್ನಮ್ಮ, ಒಬ್ಬ ಇಂದಿರಾಗಾಂಧಿ ಅಪವಾದವಾಗುತ್ತಾರೆಯೇ ಹೊರತು ಸ್ತ್ರೀ ಸ್ವಾತಂತ್ರ್ಯಕ್ಕೆ ಉದಾಹರಣೆಯಾಗುವುದಿಲ್ಲ. ಶೇಕಡ 30 ಮೀಸಲಾತಿ ಕೇಳುವುದು ಅವೈಜ್ಞಾನಿಕ ಪದ್ಧತಿ ಎಂದರು. 'ಮಹಿಳೆ ಮತ್ತು ಸಮಾಜ' ಎಂಬ ವಿಷಯದ ಬಗ್ಗೆ ಮಾತನಾಡಿದ ಹೇಮಲತಾ ಮಹಿಷಿ ಕಾನೂನಿನ ಸರಿಯಾದ ವ್ಯಾಪಕವಾದ ಅರಿವು ಮಹಿಳೆಗಿಲ್ಲ ಎಂದು ಸೌಂದರ್ಯ ಸ್ಪರ್ಧೆಯ ಹಿಂದಿರುವ ಕೊಳಕು ಮನಸ್ಸನ್ನು ಖಂಡಿಸಿದರು. ಈ ಗೋಷ್ಠಿಯ ನಂತರ ತೀವ್ರ ಪರಿಸರವಾದ ರಾಜಕೀಯದಿಂದ ದೂರವಿರಬೇಕು ಎಂಬ ಹೇಳಿಕೆ ಬಗ್ಗೆ ತೀವ್ರವಾದ ವಿವಾದ ನಡೆಯಿತು.

ಅನಂತರ ನಡೆದ ಬಹಿರಂಗ ಅಧಿವೇಶನದಲ್ಲಿ ಈ ನಿರ್ಣಯಗಳು ಮಂಡನೆಯಾದವು.

(1) 1/3ಕ್ಕೆ ಕಡಿಮೆಯಿಲ್ಲದಂತೆ ಎಲ್ಲಾ ಸಂಘ ಸಂಸ್ಥೆಗಳಲ್ಲಿ ಮಹಿಳೆಯರಿಗೆ ಅವಕಾಶ.

(2) ಕರ್ನಾಟಕ ಲೇಖಕಿಯರ ಸಂಘಕ್ಕೆ ಪ್ರಾತಿನಿಧ್ಯ ಕಡ್ಡಾಯ.

(3) ಜಿಲ್ಲಾಮಟ್ಟದಲ್ಲಿ ಸಂಘಕ್ಕೆ ಅವಕಾಶ

(4) ಸ್ಥಿರ ಅನುದಾನಕ್ಕೆ ಕೋರಿಕೆ.

(5) ಸಂಸದೀಯ ಸಂಸ್ಥೆಗಳಲ್ಲಿ ಮಹಿಳೆಯರಿಗೆ 33% ಮೀಸಲಾತಿಯನ್ನು ಕಡಿಮೆ ಮಾಡಕೂಡದು. 50%ಕ್ಕೆ ಏರಿಸಬೇಕು.

(6) ಕನ್ನಡ ಪುಸ್ತಕ ಪ್ರಾಧಿಕಾರದ ಸಗಟು ಖರೀದಿ ಯೋಜನೆಯಲ್ಲಿ ಮಹಿಳೆಯರ ಕೃತಿಗಳ ವಿಕ್ರಯಕ್ಕೆ ಒತ್ತಾಯ.

(7) ವೃತ್ತಿ ಶಿಕ್ಷಣ ಸಂಸ್ಥೆಗಳಲ್ಲಿ ಮಹಿಳೆಯರಿಗೆ 30% ಮೀಸಲಾತಿ.

(8) ಸೌಂದರ್ಯ ಸ್ಪರ್ಧೆಗೆ ವಿರೋಧ

(9) ಕ.ಸಾ.ಪ. ದ ಸಮ್ಮೇಳನಾಧ್ಯಕ್ಷತೆ ಮಹಿಳೆಯರಿಗೆ.

ನಂತರ ನಡೆದ ಸಮಾರೋಪ ಸಮಾರಂಭದಲ್ಲಿ

ಡಾ. ಕಮಲಾ ಹಂಪನಾ, ಡಾ. ನಿರುಪಮಾ, ಸಾರಾ ಅಬೂಬಕರ್, ಡಾ. ಶೈಲಜಾ ಉಡಚಣ ಇವರುಗಳನ್ನು ಸನ್ಮಾನಿಸಲಾಯಿತು. ಸಮ್ಮೇಳನದ ಅಂಗವಾಗಿ ಕವಿಗೋಷ್ಠಿ, ಯಕ್ಷಗಾಯನ, ಗೀತಗಾಯನ ಸಮಾರಂಭಗಳಿದ್ದವು.

●

---

# ಪಾಕಿಸ್ತಾನದಲ್ಲಿ ವಿವಾಹ ಕಾಯಿದೆ ವಿರುದ್ಧ ಮಹಿಳೆಯರ ಪ್ರತಿಭಟನೆ

ಪಾಕಿಸ್ತಾನದ ಲಾಹೋರಿನಲ್ಲಿ ನೂರಾರು ಮಹಿಳೆಯರು, ಇತ್ತೀಚಿನ ವಿವಾಹ ಕಾಯಿದೆ ವಿರುದ್ಧ ಘೋಷಣೆಗಳನ್ನು ಕೂಗಿ ಧರಣಿ ನಡೆಸಿದರು. ಮಹಿಳೆ ವಿವಾಹವಾಗಬೇಕಿದ್ದರೆ, ಪುರುಷ ಪಾಲಕನ ಅನುಮತಿಯನ್ನು ಕಡ್ಡಾಯವಾಗಿ ತೆಗೆದುಕೊಳ್ಳಬೇಕೆಂದು ಕೋರ್ಟ್ ಆಜ್ಞೆ ಮಾಡಿದೆ.

"ನ್ಯಾಯಾಲಯದಲ್ಲಿ, ಬೀದಿಗಳಲ್ಲಿ ಇದರ ವಿರುದ್ಧ ನಾವು ಹೋರಾಡುತ್ತೇವೆ" ಎಂದು ವುಮೆನ್ಸ್ ಆಕ್ಷನ್ ಫೋರಮ್‌ನ ಮುಖ್ಯಸ್ಥೆ ಹೀನಾಜಿಲಾನಿಯವರು ಹೇಳಿದ್ದಾರೆ.

ಲಾಹೋರ್ ಹೈಕೋರ್ಟ್, ಸೆ. 25ರಂದು 14 ವರ್ಷದ ಆಯ್‌ಷಾ ಇಜಾಜ್, 19 ವರ್ಷದ ಶಬಿನಾ ಜಫರ್ ಅವರ ವಿವಾಹವನ್ನು ತಂದೆಯ ಅನುಮತಿ ಪಡೆಯದ ಕಾರಣ, ಕಾನೂನು ಬದ್ಧವಲ್ಲವೆಂದು ತೀರ್ಮಾನ ನೀಡಿದೆ.

ಈ ಕಾನೂನು, ಮಹಿಳೆಯರ ಸಂವಿಧಾನಾತ್ಮಕ ಹಕ್ಕುಗಳನ್ನು ಉಲ್ಲಂಘಿಸುತ್ತದೆ ಹಾಗೂ ಅವರನ್ನು ಸಂಪೂರ್ಣ ಅಸಹಾಯಕರನ್ನಾಗಿ ಮಾಡುತ್ತದೆ ಎಂದು ಜಿಲಾನಿಯವರು ಹೇಳಿದ್ದಾರೆ.

ನ್ಯಾಯವಾದಿ ಅಬ್ದುಲ್ ಹಫಿಜ್ ಅವರು ಇಸ್ಲಾಂ ಕಾನೂನಿನ ಪ್ರಕಾರ ಯಾವುದೇ ವಯಸ್ಸಿನಲ್ಲಾಗಲಿ ಮಹಿಳೆಯು ಮದುವೆಯಾಗಲು ಪುರುಷ ಪಾಲಕನ ಅನುಮತಿ ಪಡೆಯಬೇಕು, ಇಲ್ಲವಾದರೆ ಅದು ಕಾನೂನುಬದ್ಧವಲ್ಲವೆಂದು ಹೇಳಿದ್ದಾರೆ.

ಇಯಾಜ್ ಹಾಗು ಜಾಫರ್ ಅವರು ಬೇರೆ, ಬೇರೆಯಾಗಿ - ಮದುವೆಯಾದ ನಂತರ ತಮ್ಮ ಮನೆಯವರು ಕಿರುಕುಳ ನೀಡುತ್ತಿರುವುದರಿಂದ ತಮಗೆ ರಕ್ಷಣೆ ನೀಡಬೇಕೆಂದು ನ್ಯಾಯಾಲಯಕ್ಕೆ ಮನವಿ ಮಾಡಿಕೊಂಡಿದ್ದರು. ಇದೇ ರೀತಿ ಅವರ ತಂದೆಯಂದಿರು, ಮದುವೆ ಕಾನೂನಿಗೆ ವಿರುದ್ಧ, ಹುಡುಗಿಯರು ಮಾಡಿರುವುದು ಅಪರಾಧ ಎಂದು ಮಾಡಿಕೊಂಡಿದ್ದ ಮನವಿಯನ್ನು ನ್ಯಾಯಾಲಯವು ಎತ್ತಿ ಹಿಡಿದು, ಆ ಹುಡುಗಿಯರ ಮನವಿಯ ತಿರಸ್ಕರಿಸಿದೆ.

●

# ಸಮಾನ ನಾಗರಿಕ ಸಂಹಿತೆ ಮತ್ತು ಕೇಂದ್ರ ಸರ್ಕಾರ

ಈ ದೇಶದ ಮುಸ್ಲಿಮರು ಮತ್ತು ಕ್ರಿಶ್ಚಿಯನ್ನರನ್ನು ಸೇರಿಸಿದಂತೆ ಭಾರತೀಯರೆಲ್ಲರಿಗೂ ಸಮಾನ ನಾಗರಿಕ ಸಂಹಿತೆಯನ್ನು ಜಾರಿಗೆ ತರುವುದರಲ್ಲಿ ಕೇಂದ್ರ ಸರ್ಕಾರ ತನ್ನ ಅಸಹಾಯಕತೆಯನ್ನು ವ್ಯಕ್ತಪಡಿಸಿದೆ!

ಆಯಾ ಧರ್ಮದ ಧಾರ್ಮಿಕ ಮುಖಂಡರಿಂದಲೇ ಬೇಡಿಕೆ ಬರದ ಹೊರತು ಈ ಸಂಹಿತೆಯನ್ನು ಜಾರಿಗೆ ತರಲಾಗುವುದಿಲ್ಲ ಎಂಬುದು ಸರ್ಕಾರದ ನಿಲುವಾಗಿದೆ.

ವಿವಾದಾಸ್ಪದವಾದ ಜಸ್ಟಿಸ್ ಕುಲದೀಪ್‌ರವರು ಹೇಳಿಕೆಯನ್ನು ಸಮರ್ಥಿಸಿ 19, 980 (ಇವುಗಳಲ್ಲಿ 1, 16, 539 ಅಂಚೆ ಕಾರ್ಡುಗಳು) ಪತ್ರಗಳು ಮತ್ತು 3,010 ತಂತಿಗಳು ಬಂದರೆ ವಿರೋಧಿಸಿ 439 ಪತ್ರಗಳು ಬಂದಿವೆ. ಭಾರತೀಯ ಸಂವಿಧಾನದ 25ನೇ ಪರಿಚ್ಛೇದದ ಪ್ರಕಾರ ಮದುವೆ, ವಿಚ್ಛೇದನ, ಉತ್ತರಾಧಿಕಾರಿತ್ವ ಮುಂತಾದುವು ಧಾರ್ಮಿಕ ವಿಷಯಗಳೆಂದು ಸೇರಿಸುವುದನ್ನು ಇದು ಮರೆತಿಲ್ಲ. ಬಹುಪತ್ನಿತ್ವವನ್ನು ಒಪ್ಪದ ಹಿಂದೂ ಧರ್ಮವನ್ನು ತ್ಯಜಿಸಿ ಇಸ್ಲಾಂ ಧರ್ಮಕ್ಕೆ ಸೇರಿ ಒಬ್ಬ ಹೆಂಡತಿ ಇರುವಾಗಲೇ ಇನ್ನೊಬ್ಬಳನ್ನು ಮದುವೆಯಾದವನ ಉದಾಹರಣೆಯಲ್ಲಿ ಕುಲದೀಪ್ ವರದಿ ಹೇಳುತ್ತದೆ. ಇಸ್ಲಾಂ ಧರ್ಮವು ಒಟ್ಟಿಗೇ ನಾಲ್ವರು ಹೆಂಡಿರನ್ನು ಹೊಂದುವ ಅನುಮತಿ ನೀಡಿದೆ! ಹೀಗೆ ಮದುವೆಯಾದವನ ಪರವಾಗಿ ವಾದಿಸಿದ ಆರ್. ಕೆ. ಜೈನ್, ಸಂವಿಧಾನದ 20 ಮತ್ತು 25ನೇ ವಿಧಿಯನ್ವಯ ಅಲ್ಪಸಂಖ್ಯಾತರ ಧಾರ್ಮಿಕ ವಿಷಯಗಳಲ್ಲಿ ತಲೆ ತೂರಿಸುವ ಹಕ್ಕು ನ್ಯಾಯಾಲಯಕ್ಕಿಲ್ಲವೆಂದೇ ವಾದಿಸಿದರು. ಕ್ರಿಶ್ಚಿಯನ್ ಧರ್ಮಕ್ಕೆ ಸಂಬಂಧಿಸಿದಂತೆಯೂ ವ್ಯಾಪಕವಾದ ನ್ಯಾಯಾಂಗ ಸುಧಾರಣೆಯಾಗಬೇಕಿದೆ. ಏಕೆಂದರೆ ಮುರಿದುಬಿದ್ದ ಮದುವೆಗಳೂ ಭಾರತದ ವಿಚ್ಛೇದನ ಕಾಯ್ದೆಯನ್ವಯ ವಿಚ್ಛೇದನ ದೊರೆಯುವವರೆಗೆ ಕ್ರಿಶ್ಚಿಯನ್ ದಂಪತಿಗಳಲ್ಲಿ ಅಸಿಂಧುವಾಗುವುದಿಲ್ಲ ಮತ್ತು ಬಹುಬೇಗ ವಿಚ್ಛೇದನಕ್ಕೆ ಆ ಧರ್ಮದವರು ಒಲಿಯುವುದೂ ಇಲ್ಲ. ಆದರೆ ಸುಪ್ರೀಂ ಕೋರ್ಟಿನ ಇತ್ತೀಚಿನ ಆದೇಶದಂತೆ ಕ್ರಿಶ್ಚಿಯನ್ನರ ಮುರಿದು ಬಿದ್ದ ಮದುವೆಗಳು ಚರ್ಚಿನ ಅಥವಾ ಕ್ರೈಸ್ತ ನ್ಯಾಯಾಲಯದ ಆದೇಶಕ್ಕಾಗಿ ಕಾಯದೇ ಭಾರತೀಯ ವಿಚ್ಛೇದನ ಕಾಯ್ದೆಯಂತೆಯೇ ಬೇರೆ ಬೇರೆಯಾಗಬಹುದಾಗಿದೆ. ಉದಾಹರಣೆಗೆ : ಮೊಲಿ ಜೋಸೆಫ್ ಅಲಿಯಾಸ್ ನಿಷಾ ತನ್ನ ಗಂಡ ಜೋಸೆಫ್ ಬದುಕಿರುವಾಗಲೇ ಅಂದರೆ ಅವನೊಂದಿಗಿನ ಮದುವೆ ಚಾಲ್ತಿಯಲ್ಲಿರುವಾಗಲೇ ಜಾರ್ಜ್ ಸೆಬಾಸ್ಟಿಯನ್ ಎಂಬಾತನೊಂದಿಗೆ ಮದುವೆಯಾದಳು. ಜಿಲ್ಲಾ ನ್ಯಾಯಾಧಿಕಾರಿ ವಿಚಾರಣೆಯೇ ಇಲ್ಲದೇ ಅವಳ ಎರಡನೇ ಮದುವೆ ಅಸಿಂಧು ಎಂದು ಸಾರಿದ. ವಾಸ್ತವವಾಗಿ ತಮ್ಮ ಮದುವೆಯಾಗುವವರೆಗೂ ಅವಳು ಜೋಸೆಫ್‌ನ ಹೆಂಡತಿಯೇ ಆಗಿದ್ದಳೆಂದೂ, ಅವಳು ಹುಚ್ಚಿ ಎಂದೂ, ತಮ್ಮ ಮದುವೆ ಅಸಿಂಧು ಎಂದು ತೀರ್ಮಾನಿಸಬೇಕೆಂದೂ ನ್ಯಾಯಾಲಯಕ್ಕೆ ಕೋರಿಕೆ ಸಲ್ಲಿಸಿದ್ದವನು ಜಾರ್ಜನೇ. ಆದರೆ ನಿಷಾ ಹೇಳುವುದು, ಚರ್ಚಿನ ಪ್ರಕಾರ ನನ್ನ ಮೊದಲ ಮದುವೆ ಮುರಿದಿದೆ ಎಂದು. ಆದರೆ ಕಾನೂನಿನ ಕಣ್ಣಲ್ಲಿ ಈ ಮದುವೆ ಮುರಿದಿಲ್ಲ. ಆದ್ದರಿಂದ ಕೊನೇ ಪಕ್ಷ ಕ್ರೈಸ್ತ ಧರ್ಮಕ್ಕೆ ಸಂಬಂಧಿಸಿದಂತೆಯಾದರೂ ಈ ದೇಶದಲ್ಲಿ ಚರ್ಚಿಗಿಂತ ಹೆಚ್ಚಿನ ಸ್ಥಾನ ನ್ಯಾಯಾಲಯಕ್ಕಿದೆ!

ಪಿ. ವಿ. ನರಸಿಂಹರಾವ್ ಪ್ರಧಾನಿಯಾಗಿದ್ದಾಗ ಲೋಕಸಭೆಯಲ್ಲೇ ಒಂದು ಮಸೂದೆಯನ್ನು ತರುವ ಪ್ರಸ್ತಾಪ ಬಂದಿತ್ತು. ಆದರೆ ದೇವೇಗೌಡರು ಪ್ರಧಾನಿಯಾಗುತ್ತಲೇ 'ಆಯಾ ಧರ್ಮದ ಧಾರ್ಮಿಕ ಮುಖಂಡರಿಂದಲೇ ಬೇಡಿಕೆ ಬಂದ ಹೊರತು ಈ ಸಮಾನ ನಾಗರಿಕ ಸಂಹಿತೆಯನ್ನು ಜಾರಿಗೆ ತರಲಾಗುವುದಿಲ್ಲ" ಎಂದು ಹೇಳಿ ಅಲ್ಪಸಂಖ್ಯಾತರ ಮನಸ್ಸಿಗೆ ಘಾಸಿಗೊಳಿಸಲಾಗದೆಂಬ ಕಾಳಜಿಯನ್ನು ವ್ಯಕ್ತಪಡಿಸಿದ್ದಾರೆ.

# ಭಯ

ಸರಸ್ವತಿ ದು.

ಹುಡುಗಿ ನೆಮ್ಮದಿಯಾಗಿದ್ದಳು. ಅವ್ವನ ಸೀರೆಯ ಬಿಳಿಯಲ್ಲಿ, ಅವಳ ಬಳೆಗಳ-ಹಸಿರಿನಲ್ಲಿ ನೆಮ್ಮದಿಯಾಗಿದ್ದಳು. ಕುದಿತ ಗೊತ್ತೆ ಇರಲಿಲ್ಲ. ಅವ್ವನ ಬೆರಳೊ, ಸೆರಗೊ ಹಿಡಿದು ನಡೆಯುತ್ತಿದ್ದವಳಿಗೆ ಭಯದ ಅರಿವೆ ಇರಲಿಲ್ಲ. ಯಾವ ವಯಸ್ಸಲ್ಲಿ ಅವ್ವನ ಜೊತೆ ಆಶ್ರಮಕ್ಕೆ ಹೋಗೋದನ್ನ ಶುರು ಮಾಡಿದ್ದು? ನೆನಪಿಲ್ಲ. ನಡೆಯೋಕೆ ಬರದೆ ಇದ್ದ ವಯಸ್ಸಲ್ಲಿ ಅವ್ವ ಎತ್ಕೊಂಡು ಆಶ್ರಮಕ್ಕೆ ಹೋಗ್ತಾ ಇದ್ದದ್ದು ನೆನಪಿದೆ. ದಪ್ಪಗೆ ಎಮ್ಮೆ ಕರುವಿನ ಥರ ಇದ್ದವಳನ್ನು ಎತ್ತ್‌ಕೊಂಡ್ ಹೋಗ್ತಾ ಇದ್ದ ಅವ್ವ ಕೆಳಗಿಳ್ಸಿ ಉಸ್ಸಪ್ಪಾ ಅಂತ ಕೈ ಕುತ್ತಿಗೆ ನೀವ್‌ಕೊಳ್ತಾ ಇದ್ಲು. ಗುದ್‌ಮಟ್ಟೆ ಅಂದು ನಗೋಳು. ಆ ಆಶ್ರಮದಲ್ಲಿ ಎಲ್ಲರೂ ಬಿಳಿ ಬಟ್ಟೆಯವರೆ! ಬಿಳಿ ಪರದೆ, ಜಮಖಾನ, ಮಂದ ಬೆಳಕು, ಮೇಲುವಾದ ಹಾಡು, ಹೂ, ಊದುಬತ್ತಿಯ ಗಂ ಅನ್ನುವ ವಾಸನೆ ಎಲ್ಲವೂ ಶಾಂತ, ಯಾವುದು ಭಯವಾಗ್ತ ಇರ್‍ಲಿಲ್ಲ.

ಅವ್ವನ ಬಿಳಿ, ಹಸಿರು ಬಣ್ಣದೊಳಗೆ ನೆಮ್ಮದಿಯಾಗಿದ್ದ ಹುಡುಗಿಯೊಳಗೆ ಭಯದ ಕೆಂಪು, ಹಳದಿ, ಕಪ್ಪು ಬಣ್ಣಗಳು ಹೇಗೆ ನುಸುಳಿದವು? ಕೆಂಪನೆ ಬಣ್ಣ ನುಸುಳಿದ್ದು ಯಾವ ದಿನ ಅಂತ ಚೆನ್ನಾಗ್ ನೆನಪಿದೆ.

ಆ ದಿನ..........

ಅವ್ವ ಚೆನ್ನಾಗಿ ಎಣ್ಣೆ ಹಾಕಿ, ಅಚ್‌ಕಟ್ಟಾಗಿ ಎರಡು ಜಡೆ ಹೆಣೆದು ಮೇಲೆ ಕಟ್ಟಿದ್ಲು. ಸಮ ಆಗ್ಲಿ ಅಂತ ಬೆನ್ನಿನ ಮೇಲಿನ ಜಡೆಗೆ ಗುದ್ದಿದ್ಲು. ಸಾಕು ಬಿಡು ಅಂತ ಹಣೆಗಿಟ್‌ಕೊಂಡು ಸ್ಕೂಲ್‌ಬ್ಯಾಗ್ ತಗಂಡು ಹೊರಟ್ರೆ, ಚಡ್ಡಿಯೆಲ್ಲಾ ಒದ್ದೆ ಒದ್ದೆ ಆದಂಗನ್ನಸ್ತು. ಥೂ ಅಂತ ಆ ಚಡ್ಡಿ ತೆಗೆದು ಇನ್ನೊಂದು ಚಡ್ಡಿ ಏರಿಸ್ಕಂಡು ಹೊರಟ್ನು. ಮೆಟ್ಲು ಇಳಿಬೇಕಾರೆ ಅಕ್ಕ ಹಿಂದೆ ಬಂದು, ಸ್ಕೂಲ್‌ಗ್ ಹೋಗ್‌ಬೇಡ ಬಾ ಅಂದ್ಲು. ಹೋಗೆಲೇ ಒಗ್ತಿನಿ ಅಂತ ಹೊರಟೆ. ಅಕ್ಕ ಹೋಗಿ ಅವ್ವನಿಗೆ ಏನೊ ಹೇಳಿರ್‌ಬೇಕು, ಅವ್ವ ದಡದಡ ಬಂದು - ಸಾರಿ ಸ್ಕೂಲ್‌ಗ್ ಇವತ್ ಒಗ್‌ಬೇಡ ಬಾಯಿಲ್ಲಿ, ಮನೇಲೆ ಇರಿವಂತೆ ಅಂತ ಕರೆದ್ಲು. ಇಲ್ಲಪ್ಪ, ನಾನ್ ಒಗ್ಲೆ ಬೇಕು ಅಂತ ಇರೋವಾಗ್ಲೆ ಚಡ್ಡಿಯ ಒದ್ದೆ ಜಾಸ್ತಿ ಆಯ್ತು. ಕಸಿಪಿಸಿಯಾಗಿ ಉಚ್ಚೆನಾ? ಅಂದ್‌ಕೊಂಡು ವಾಪಸ್ ಬಂದ್ನು.

ಅವ್ವ - ಬಿಸಾಕಿರ ಚೆಡ್ಡಿ ತಗಂಡು ಒಗಿ, ನೀರ್ ಕಾಯಿಸ್ತೀನಿ, ಸ್ನಾನ ಮಾಡ್‌ಕ ಅಂದ್ಲು. ಈಗ್ ಹಾಕಂಡಿರೋದನ್ನು ಬಿಚ್ಚಲೇ ಬೇಕಾಗಿತ್ತು. ಬಚ್ಲು ಮನೆ ಲೈಟ್ ಹಾಕಿ, ಸೌದೆ ಮೇಲ್ ಎಸ್ದಿದ್ ಚಡ್ಡಿ ತಗಳಕ್ಕೆ ಹೋದ್ರೆ ಹಸಿ ಹಸಿ ಕೆಂಪು ರಕ್ತ. ಸೌದೆಲಿದ್ ಕೆಂಪ್ ಇರುವೆ ಅದಕ್ ಮುತ್‌ಕತಾ ಇದ್‌ವು. ಭಯ ಆಗಿ ಅಯ್ಯಪಾ ಅಂದೆ. ಅವತ್ತಿಂದ ಕೆಂಪಿನ ಭಯ ನುಸುಳಿತು. 2-3 ಚೆಡ್ಡಿ ಬದಲಾಯಿಸಿದ್ರು ಒದ್ದೆ ಕಮ್ಮಿ ಆಗ್ತಾ ಇಲ್ಲ. ಯಾಕ್ ಹಿಂಗೆ? ಅಂದ್‌ಕೊವಾಗ ಅವ್ವ ಬಂದು, ಮಡಿಸಿದ ಬಟ್ಟೆ ಕೊಟ್ಟು, ಇದನ್ನ ಚಡ್ಡಿವಳ್‌ಗೆ ಇಟ್ಕ, ಎಷ್ಟ್ ಚೆಡ್ಡಿ ಅಂತ ಬದಲಾಯಿಸ್ತೀಯಾ? ಅಂದ್ಲು.

ಸ್ನಾನ ಆದ್ ಮೇಲೆ, ಒಂದ್ ಮೂಲೇಲಿ ಚಾಪೆ, ತಟ್ಟೆ ಲೋಟ ಇಟ್ಟು ಅವ್ವ ಒಂದ್ ವಾರ ಬ್ಯಾರೆ ಮಲ್‌ಕಾ ಅಂದ್ಲು. ತುಂಬ ಅಳು ಬಂತು. ಮಾಡಿ ಮೇಲ್ ಹೋಗಿ ಟ್ಯಾಂಕ್ ಮೇಲತ್ತಿ ಕೂತ್ಕೊಂಡು ಅತ್ತೆ. ಯಾರ್ ಕರೆದ್ರು ಬರ್‍ಲಿಲ್ಲ. ಟ್ಯಾಂಕ್ ಮೇಲೆ ಮುದುರಿ ಮಲಕ್ಕಂಡ್ನೆ. ಏನು ಅಂತ ಅವ್ವ ಹೇಳಿರ್‌ಬೇಕು, ಅಪ್ಪ ಆಫೀಸ್‌ನಿಂದ ಬಂದವ್ನೆ ಮೇಲ್ ಬಂದು ಏಯ್ ಮಗು, ಮನೆಗ್ ಬಾ ಅಂತ ಟ್ಯಾಂಕ್ ಮೇಲಿಂದ ಇಳ್ಸಿ ಕರ್ಕೊಂಡ್ ಬಂದ. ಒಂದ್ ವಾರ ಎಂತ ಹಿಂಸೆ, ರಕ್ತದ ಬಟ್ಟೆ ಒಗ್‌ದು ಸಾಕಾಯ್ತು, ಆಮೇಲೊಂದಿನ ನಿಂತೊಯ್ತು. ಖುಷಿ ಆಗಿ ಅಬ್ಬಾ ಪೀಡೆ ತೊಲಗ್ತು ಅಂದ್‌ಕೊಂಡ್ನು. ದರಿದ್ರ ಎಷ್ಟ್ ಭಯ ಹುಟ್ಟಸಿತ್ತು.

ಒಂದಷ್ಟು ದಿನ ಬಿಟ್ ಮೇಲೆ, ಕೆಂಪು ಮತ್ತೆ ಬಂದಿತ್ತು. ಗಾಬರಿಯಾಗಿ ಅವ್ವಂಗೆ ಹೇಳಿದೆ. ಅದು ತಿರ್‍ಗಾ ಬಂದಿದೆ ಅಂತ

ಅಯ್ಯೊ ಪಾಪಿ ಅದು ತಪ್ಪಿದ್ದಲ್ಲ ಕಣೆ, ನಮ್‌ಗೆ ಅಂತ ಅತ್ನು. ದೊಡ್ಡವಳಾದೆ ಅನ್ನೊ ಗುರ್ತಿಗೆ ಬಂದಿದೆ. ಇನ್ನ ಇದರ ಕಾಟ ಇರಲ್ಲ ಅಂದ್‌ಕೊಂಡ್ರೆ, ಅದು ಮತ್ತೆ ಮತ್ತೆ ಬರೋ ಪೀಡೆ ಅಂತ ಗೊತ್ತಾಯ್ತು. ಕೆಂಪಿನ ಭಯ ನಿರಂತರ ಜೊತೆಯಾಯ್ತು. ಕಂಬಳಿಯೊಳಗೆ ಅಪ್ಪನ ಜತೆ ಬೆಚ್ಚಗೆ ಮಲಗ್ತಾ ಇದ್ದಿದ್ದು ತಪ್ಪಿ ಹೋಯಿತು. ಈ ಕೆಂಪು ಅಪ್ಪ ಮಗಳನ್ನು, ಗಂಡಸು ಹೆಂಗಸೆಂದು ಬೇರೆ ಮಾಡಿದ್ದು ಹೇಗೆ ಅಂತ ಗೊತ್ತಾಗಲಿಲ್ಲ.

ಈಗ ಒಬ್ಬಳೆ ಓಡಾಡಲು ಭಯ. ರಾಗಿ ಮಿಲ್ಲಿಗೆ, ಕಾಕನಂಗಡಿಗೆ, ಸೀಮೆಣ್ಣೆಗೆ, ಸೊಸೈಟಿಗೆ ಆರಾಮವಾಗಿ ಓಡಾಡ್ತ್ತಿದ್ನು. ಹೋಗೊಕೆ ನಕರಾ ಮಾಡಿದ್ರೆ ಅವ್ವಾ 'ಸಾರಿ ಬಸ್ಸಲ್ಲಿ ಹೋಗ್ ಬಂದ್ ಬಿಡೆ ಅನ್ನೋಳು', ಡರ್ರ್ ಅಂತ ಬಸ್ ಬಿಟ್ಕಂಡ್ ಹೋಗಿ ಸಾಮಾನ್ ತಗಂಡು ವಾಪ್ಪಸ್ ಮನೆಗ್ ಬಂದ್ ಅವ್ವನ ಮುಂದನೇ ಬಸ್ ನಿಲ್ತಾ ಇದಿದ್ದು. ಈಗ-ಕಾಕ್‌ಸಂಗ್‌ಡಿಗೆ ಹೋಗೋಕ್ ಭಯ. ಯಾರು ಇಲ್ದಿರೋದ್ ನೋಡಿ ಮೇಲಕ್ ಬಾ ಅಂಗ್‌ಡಿ ಒಳ್ಗೆ ಅಂತ ಕೈ ಎಳಿತಾನೆ. ಹೆದ್ರುಕಂಡ್ ಓಟ ಮನೆಗೆ.

ಸ್ಕೂಲ್‌ಗ್ ಹೋಗೊ ರೋಡಲ್ಲಿ ಆ ಮುದ್‌ಯಾ ಪಂಚೆ ಸಂದಿಂದ ಅದನ್ನ ತೋರಿಸ್ಕಂಡು ಮುಟ್ಕಕ್ ಬರೋನು. ಆ ಮುದುಕನ್ ಭಯಕ್ಕ ಆ ರೋಡನ್ ಬಿಟ್ಟು ಬೇರೆ ರೋಡ್ ಹಿಡ್ಕೊಂಡಿದೆ.

ಕಾಕಾ ಬೀದಿಯೋನು, ಆ ಮುಧಿಯ ಬೀದಿಯೋನು ಆದ್ರೆ ಅಷ್‌ನು! ಅಣ್ಣಾ ಆಗ್ ಬೇಕು ಲೆಕ್ಕ್‌ದಲ್ಲಿ. ಜತೇಲೆ ಆಡ್ಕೊಂಡ್ ಬೆಳ್‌ದೋರು. ಈಗ ಅವನ್ ಜತೆ ಹೋಗೋಕೆ ಭಯ ಆಗುತ್ತೆ. ಜತೇಲಿ ಹೋಗೊವಾಗ, ಚಳಿ ಬಾರೆ, ನಾನ್ ಶಾಲ್ ಒದ್‌ಸ್ತೀನಿ ಅಂದು ಹೆಗ್ಲು ಮೇಲೆ ಕೈ ಹಾಕಿ, ಕೆಳಗ್ ಇಳ್‌ಸೋನು. ಹಲ್ಕ ನಾಯಿ, ದರಿದ್ರ ಈ ಮೊಲೆಗಳ್ ಯಾಕ್ ದೊಡ್ಡಾಗ್‌ಬೇಕು? ಅವ್ವನ ಹತ್ರ ಹೇಳೋಣ ಅಂದ್ರೆ ಗಂಟ್ಲಿಂದ ಮಾತೆ ಬರ್ತಾ ಇರ್ಲಿಲ್ಲ. ಮಾತನ್ನ ಗಂಟ್‌ಲೊಳಗೆ ಯಾರ್ ಅಮುಕ್‌ತ್ತಿದ್‌ರು ಅಂತ ಗೊತ್ತಾಗ್‌ಲಿಲ್ಲ.

ಆ ತಾತ, ಆ ಮುದಿಯ, ಆ ಅಣ್ಣ - ಅವರ ಕಣ್ಣೊಳಗಿನ ಅಸಹ್ಯದ ಹಳದಿ ಬಣ್ಣ ಭಯವಾಗಿ ನುಸುಳಿತ್ತು.

ಅವತ್ತು ಶಾಲೆಯಲ್ಲಿ ಉಚ್ಚೇಗೆ ಎಷ್ಟ್ ಅವ್‌ಸ್ರ ಆಗಿತ್ತು. ಸಾವ್ರಸರ್ತಿ ಕೇಳಿರು ಬಿಡ್ಲಿಲ್ಲ ಟೀಚರು. ಬೆಲ್ ಆದ್ ಮೇಲೆ ಓಡೋಣ ಅಂದ್ರೆ, ಜನಗಣಮನ ಮುಗ್ಸೆ ಹೋಗ್‌ಬೇಕು ಅಂದ್ನು. ಥೂ ಇದೊಂದ್ ಜನಗಣಮನ ಅಂದ್‌ಕೊಂಡ್ ಹಾಡೊವಾಗ್ಲೆ ಬಳ್ ಅಂತ ಉಚ್ಚೇ ಬಂದ್, ಲಂಗ ನೆಂದ್ ಹೋಯ್ತು. ಹರಿದ ಉಚ್ಚೆ ನೆಲದ್ ಮೇಲೆ ನಿಂತ್ಕಂತು. ಯಾರ್ಗೂ ಗೊತ್ತಾಗ್‌ದಂಗೆ ಒಗ್ ಬಿಡನಾ ಅಂತ ಲಂಗ ಮುದ್ರುಕಂಡ ಹೊರ್‌ಡೊ ವೇಳೆಗ್ ಟೀಚರ್ ಓಂದಿಂದ ಬಂದು 'ಕತ್ತೆ ನಾಚ್ಗೆ ಆಗಲ್ಲ, ಇಷ್ಟ್ ದೊಡ್ ಹುಡ್ಗಿ ಆಗಿ ಕ್ಲಾಸಲ್ಲಿ ಉಚ್ಚೆ ಮಾಡಿದೀಯಾ, ಮೆತ್ತಗೆ ಹಂಗೆ ಒಗ್ತಾ ಇದೀಯಾ, ಒರ್ಸಿ ಹೋಗು ಕತ್ತೆ ಅಂತ ಎಲ್ಲರೆದ್ರಿಗೂ ಜಡೆ ಹಿಡ್ದು ಹಿಂದಕ್ ಎಳ್‌ದ್ರು. ಎಲ್ಲರೆದ್ರುಗು ಎಷ್ಟ್ ಅವಮಾನ ಆಯ್ತು. ಎಲ್ಲೂ ಕ್ಕಿಕ್ಕಿ ಅಂತ ನಕ್ರು, ಉಚ್ಚೆ ಪುರ್‌ಕಿ ಅಂತ. ಅವರೆದ್ರುಗೆ ಒರ್ಸೊ ಕೆಲ್ಸ! ಆಮೇಲೆ ಒಂದ್ ವಾರ ಸ್ಕೂಲಿಗ್ ಹೋಗಿರ್ಲಿಲ್ಲ. ಬೇರೆ ಸ್ಕೂಲಿಗ್ ಸೇರ್‍ಸು, ನಂಗ್ ಆ ಸ್ಕೂಲ್ ಬೇಡ ಅಂತ ಅವ್ವನ್ನ ಪೀಡ್ಸಿದ್ದೆ. ಯಾಕೆ ಅಂತ ಗೊತ್ತಿಲ್‌ದೆ ಅವ್ವ ಗದರಿದ್ನು. ನಾನೆಂಗ್ ಸೇರಿಸ್ಲಿ, ನಿಮ್ಮಪ್ಪನ್ ಕೇಳು ಅಂದ್ನು. ಸುಮ್ನೆ ಆಗಿ ಮತ್ತು ಶಾಲೆಗ್ ಹೋದೆ. ಎಲ್ರು ಮರ್ತಿರ್‌ಬಹುದು ಅಂತ.

ಇನ್ನೊಂದಿನ ಗಣಿತದ ಟೀಚರ್ ಕ್ಲಾಸಲ್ಲಿ ಬಯ್ದ್ರು. ಒಂದ್ ಸಣ್ ಲೆಕ್ಕಾನು ಬರಲ್ಲ ನಿಂಗೆ, ತಲೇಲಿ ಸೆಗಣಿ ತುಂಬ್‌ಕೊಂಡಿದಿಯ, ಎದೆ ಸೀಳಿದ್ರೆ ನಾಕ್ ಅಕ್ಷರ ಬರಲ್ಲ, ಒಳ್ಳೆ ಸ್ಕೂಲ್ ಮಾತ್ರ ಬೇಕು ನಿಮ್‌ಗೆ, ಜಾತಿ ಹೆಸ್ರ ಹೇಳ್ಕೊಂಡ್ ಬಂದ್ ಬಿಡ್ತೀರಿ ಅಂತ ಈಚೆ ಕಳಿಸಿದ್ರು. ಅವ್‌ರು ಕೂಗಿದ್ ಅಷ್ಟೇ ಜೋರಾಗಿ ಕೂಗ್‌ಬೇಕು ಅಂತ ಅನ್ನಿಸಿತ್ತು. "ಸಿಂಪಲ್ ಲೆಕ್ಕ ನಂಗು ಅರ್ಥ ಆಗುತ್ತೆ ಮಿಸ್ $(a+b)^2 = a^2+2ab+b^2$" ಅಂತ ಇಂಗ್ಲೀಷ್‌ನಲ್ಲಿ ಕೂಗೋಕ್ ಬರ್ದೆ ಕಣ್ಣಲ್ಲಿ ನೀರ್ ಬಂತು. ಅವಮಾನದ ಕಪ್ಪು ಬಣ್ಣ ಭಯವಾಗಿ ನುಸುಳಿತ್ತು.

ಕಣ್ಣು ಮುಚ್ಚಿದ್ರೆ ಕೆಂಪು, ಹಳದಿ, ಕಪ್ಪು ಬಣ್ಣಗಳ ಕುಣಿದು, ಭಯದಿಂದ ಹುಡುಗಿ ಕುಗ್ಗಿದಳು. ಈ ಭಯದಿಂದ ಬಿಡುಗಡೆನೇ ಇಲ್ಲ ಅನ್ನಿ ಭಯದ ಮುದ್ದೆಯಾದಳು. ಹಳದಿ, ಕೆಂಪು, ಕಪ್ಪು ಬಣ್ಣಗಳು ಚೆಂಡಾಡಿದವು.

●

# ಸಾತಿನ್ನರ ಹೋರಾಟ

ಮಹಿಳಾ ಸಶಕ್ತತೆಯನ್ನು ಕುರಿತ ಸಮಾವೇಶವೊಂದು ರಾಜಸ್ಥಾನದಲ್ಲಿ ಕಳೆದ ವರ್ಷ ಅಕ್ಟೋಬರ್‌ನಲ್ಲಿ ನಡೆಯಿತು. ಸಮಾವೇಶದಲ್ಲಿ ಮಹಿಳಾ ಅಭಿವೃದ್ಧಿ ಕಾರ್ಯಕ್ರಮದಡಿ ಕೆಲಸ ಮಾಡುತ್ತಿರುವ ಸಾತಿನ್ನರ ಪಾತ್ರವನ್ನು ಬಲಗೊಳಿಸಬೇಕೆಂದು ಕರೆ ನೀಡಲಾಯಿತು. ಮಹಿಳಾ ಕಾರ್ಯಕರ್ತೆಯರು ಹೆಚ್ಚಿನ ಸಂಖ್ಯೆಯಲ್ಲಿದ್ದ ಈ ಸಮಾವೇಶದಲ್ಲಿ ಸಾತಿನ್‌ರನ್ನು ತೆಗೆದು ಹಾಕಬೇಕೆಂಬ ಸರ್ಕಾರದ ನಿರ್ಧಾರವನ್ನು ವಿರೋಧಿಸಲಾಯಿತು. ರಾಷ್ಟ್ರೀಯ ಮಹಿಳಾ ಆಯೋಗವು ನಿಯೋಜಿಸಿದ್ದ ಈ ಸಮಾವೇಶದ ಮುಖ್ಯ ಉದ್ದೇಶ - ಸಾತಿನ್ನರ ಭವಿಷ್ಯ ಹಾಗು ಆ ಬಗ್ಗೆ ಜನರಲ್ಲಿ ಅರಿವು ಮೂಡಿಸುವುದಾಗಿತ್ತು. 1984ರಲ್ಲಿ ಪ್ರಾರಂಭಗೊಂಡ ಮಹಿಳಾ ಅಭಿವೃದ್ಧಿ ಕಾರ್ಯಕ್ರಮದ ಭಾಗವಾದ ಸಾತಿನ್ ಮಾದರಿಯನ್ನು ಎಲ್ಲಾ ಜಿಲ್ಲಾ ಹಾಗು ಗ್ರಾಮಮಟ್ಟದಲ್ಲಿ ಪ್ರಾರಂಭಿಸಬೇಕು ಅಲ್ಲದೆ ಗ್ರಾಸ್‌ರೂಟ್ ಮಟ್ಟದಲ್ಲಿ ದುಡಿಯುವವರಿಗಾಗಿ ಪ್ರಾರಂಭಗೊಂಡ ಸಾತಿನ್ ಮಾದರಿಯನ್ನು ನಿಷ್ಪ್ರಯೋಜಕಗೊಳಿಸಬಾರದು ಎಂಬ ನಿರ್ಧಾರಕ್ಕೆ ಒಮ್ಮತ ಸೂಚಿಸಲಾಯಿತು. ಸಾತಿನ್ನರು ಪಡೆಯುತ್ತಿರುವ ರೂ. 250/- ಗೌರವ ಧನವನ್ನು ಹೆಚ್ಚಿಸಬೇಕು, ಹಾಗು ಅವರನ್ನು ಸ್ವಯಂಸೇವಕರಿಗಿಂತ ಹೆಚ್ಚಿನ ಸ್ಥಾನವನ್ನು ನೀಡಬೇಕೆಂದು ಎಲ್ಲರು ಅಭಿಪ್ರಾಯಪಟ್ಟರು.

ಮಹಿಳೆಯರ ಮೇಲಿನ ಹಿಂಸೆ ಹೆಚ್ಚಾಗುತ್ತಿದೆ ಅಲ್ಲದೆ ಪಿತೃಪ್ರಧಾನ ಸಂಪ್ರದಾಯಗಳನ್ನು ವಿರೋಧಿಸುವ ಮಹಿಳೆಯರು ಅನೇಕ ತೊಂದರೆ ಅನುಭವಿಸುತ್ತಾರೆ. ಇಂತಹ ಸ್ಥಿತಿಯಲ್ಲಿ ಸಾತಿನ್ನರು ಕೆಲಸ ಮಾಡುತ್ತಿದ್ದಾರೆ. ಅವರ ಕೆಲಸ ಬಹಳ ಮುಖ್ಯವಾದುದು. ಹಳ್ಳಿಯ ಮಟ್ಟದಲ್ಲಿ ಬದಲಾವಣೆಯ ಪ್ರಕ್ರಿಯೆಯನ್ನು ಪ್ರಾರಂಭಿಸುವ ಮೂಲಕ, ಮಹಿಳೆಯರನ್ನು ಸಾಂಪ್ರದಾಯಿಕ ಕರ್ತವ್ಯಗಳಿಂದ ಸಾರ್ವಜನಿಕ ಕರ್ತವ್ಯಕ್ಕೆ ತರುವಂತಹ ಮುಖ್ಯ ಕೆಲಸವನ್ನು ಅವರು ಮಾಡುತ್ತಿದ್ದಾರೆ ಎಂದು ಮಹಿಳಾ ಆಯೋಗದ ಅಧ್ಯಕ್ಷೆ ಮೋಹಿನಿಗಿರಿಯವರು ಅಭಿಪ್ರಾಯಪಟ್ಟರು.

ಸಾತಿನ್ನರು ಮಾಡುವ ಕೆಲಸದ ವ್ಯಾಪ್ತಿಯನ್ನು ಅಂಕಿ ಸಂಖ್ಯೆಯಿಂದ ಅಳೆಯಲು ಸಾಧ್ಯವಿಲ್ಲವೆಂದು ಮಹಿಳಾ ವಿಕಾಸ ಅಭಿಕರಣ ಸಾತಿನ್ ಕರ್ಮಚಾರಿ ಸಂಘದ ಆರತಿ ಸಾಹ್ನಿಯವರು ಅಭಿಪ್ರಾಯಪಟ್ಟಿದ್ದಾರೆ. ಆರೋಗ್ಯ, ರೋಗ ನಿರೋಧಕ ಲಸಿಕೆ ಕಾರ್ಯಕ್ರಮ, ಕೈ ಪಂಪುಗಳ ರಿಪೇರಿ, ಬಾಲ್ಯ ವಿವಾಹ ತಡೆಯುವುದು - ಈ ರೀತಿಯ ಅನೇಕ ಕೆಲಸಗಳನ್ನು ಸಾತಿನ್ನರು ಮಾಡುತ್ತಾರೆ. ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಡಿಯಲ್ಲಿ ಶೇ. 40% ಮಹಿಳಾ ಮೀಸಲಾತಿಯನ್ನು ತುಂಬುವಲ್ಲಿ ಸಾತಿನ್ನರ ಶ್ರಮ ದೊಡ್ಡದು. ಮಹಿಳೆಯರಿಗೆ ಸಾಲ ದೊರಕಿಸಿಕೊಡಲು, ಅವರ ಹೆಸರಿನಲ್ಲಿ ಜಮೀನು ನೊಂದಾಯಿಸಲು ಸಾತಿನ್ನರು ಶ್ರಮಿಸಿದ್ದಾರೆ. ಇಂತಹ ಕೆಲಸದ ಹೊರೆಯನ್ನು ಹೊತ್ತಿರುವ ಸಾತಿನ್ನರನ್ನು ಸರ್ಕಾರವು ಸ್ವಯಂ ಸೇವಕರೆಂದು ಪರಿಗಣಿಸಿ ಕೇವಲ 250/- ರೂ.ಗೆ ಮಹಿಳೆಯರನ್ನು ದುಡಿಸಿಕೊಳ್ಳುವುದು ವಿಪರ್ಯಾಸ! ಇದಕ್ಕೆ ಸಂಬಂಧಪಟ್ಟಂತೆ ಹೈಕೋರ್ಟಿನಲ್ಲಿ ನಡೆದ ಕೇಸಿನಲ್ಲಿ ರಾಜ್ಯ ಸರ್ಕಾರವು ತಾಳಿದ ನಿಲುವು ಖಂಡನಾರ್ಹ. ಸರ್ಕಾರವು ಮಹಿಳಾ ಅಭಿವೃದ್ಧಿ ಕಾರ್ಯಕ್ರಮದಲ್ಲಿ ಸಾತಿನ್ನರನ್ನು ನೌಕರರೆಂದು ಪರಿಗಣಿಸುವುದಿಲ್ಲ ಅಲ್ಲದೆ ಅಲ್ಲಿ ಯಜಮಾನ-ಆಳು ಎಂಬ ಸಂಬಂಧ ಇರುವುದಿಲ್ಲವೆಂದು ತಿಳಿಸಿದೆ.

ಸಮಾವೇಶದಲ್ಲಿ ಮಾತನಾಡಿದ ಸಾತಿನ್ನರು - ಗೌರವಧನಕ್ಕೆ ಬದಲಾಗಿ ಸ್ವಯಂ ಉದ್ಯೋಗ ಯೋಜನೆಗಳ ಪ್ರಯೋಜನ ಪಡೆಯಬಹುದೆಂಬ ಸರ್ಕಾರದ ಸಲಹೆಯನ್ನು ತಿರಸ್ಕರಿಸಿದರು. ಈಗಾಗಲೆ ಇರುವ ಹೊರೆಯೊಂದಿಗೆ, ಯಾವುದೇ ಬೆಂಬಲ ವ್ಯವಸ್ಥೆ ಇಲ್ಲದೆ ಸ್ವಯಂ ಉದ್ಯೋಗ ಪ್ರಾರಂಭಿಸುವ ಸಾಹಸಕ್ಕೆ ಕೈ ಹಾಕುವುದು ಸಮಂಜಸವಲ್ಲೆಂದು ತೀರ್ಮಾನಿಸಿದರು. ಮಹಿಳಾ ಅಭಿವೃದ್ಧಿ ಕಾರ್ಯವು ಈಗಾಗಲೆ ಶೋಷಿತರಾದವರನ್ನೆ ಮತ್ತೆ ತುಳಿಯುವ ವ್ಯವಸ್ಥೆಯ ಮೇಲೆ ನಿಂತಿರುವುದು ವಿರೋಧಾಭಾಸವೇ ಸರಿ. ಮಹಿಳಾ ಅಭಿವೃದ್ಧಿ ಕಾರ್ಯಕ್ರಮವು ಮುಂದಾಲೋಚನೆಯಿಂದ ಕೂಡಿರಬೇಕು ಅಲ್ಲದೆ ರಾಜ್ಯದ ಒಟ್ಟು ಅಭಿವೃದ್ಧಿಗೆ ಸಾತಿನ್ನರ ವಿಶಿಷ್ಟ ಕೌಶಲ್ಯಗಳನ್ನು ಬಳಸಿಕೊಳ್ಳಲು ಬೇರೆ ಬೇರೆ ದಾರಿಯನ್ನು ಹುಡುಕಬೇಕೆಂದು ಅಭಿಪ್ರಾಯಪಟ್ಟರು.

ಸಮಾವೇಶದಲ್ಲಿ, ಸಾತಿನ್ನರನ್ನು ಕುರಿತು ನಡೆಸಿದ ಅಧ್ಯಯನದ ಆಧಾರದ ಮೇಲೆ ರಾಷ್ಟ್ರೀಯ ಮಹಿಳಾ ಆಯೋಗವು ತಯಾರಿಸಿರುವ ವರದಿಯನ್ನು ಬಿಡುಗಡೆ ಮಾಡಲಾಯಿತು. ವರದಿಯನ್ನು ಈಗಾಗಲೆ ರಾಜ್ಯ ಸರ್ಕಾರಕ್ಕೆ ಸಲ್ಲಿಸಲ್ಪಾಗಿದೆ. ಸಾತಿನ್ನರು ಕುಶಲ ಕೆಲಸಗಾರರು, ಪರಿಣಾಮಕಾರಿಯಾಗಿ ಕೆಲಸ ಮಾಡಬಲ್ಲರು ಅಲ್ಲದೆ ಗ್ರಾಮೀಣ ಮಹಿಳೆಯರನ್ನು ಅಭಿವೃದ್ಧಿಯಲ್ಲಿ ಒಳಗೊಳ್ಳಿಸುವ ಕಾರ್ಯದಲ್ಲಿ ಯಶಸ್ವಿಯಾಗಿರುವರೆಂದು ವರದಿ ಹೇಳಿದೆ.

ವರದಿಯಲ್ಲಿ ಕೈಗೊಂಡಿರುವ ನಿರ್ಧಾರಗಳ ಸಂಕ್ಷಿಪ್ತ ವಿವರ ಈ ರೀತಿ ಇದೆ.

* ಜಿಲ್ಲಾ ಹಾಗು ಗ್ರಾಮ ಮಟ್ಟದಲ್ಲಿ ಸಾತಿನ್ನರು ತಮ್ಮದೆ ಆದ ವ್ಯಕ್ತಿತ್ವವನ್ನು ಹೊಂದಿದ್ದಾರೆ. ಅದಕ್ಕೆ ವ್ಯಾಪಕ ಸಮರ್ಥನೆಯೂ ಸಿಕ್ಕಿದೆ.

* ಅಶಿಕ್ಷಿತ ಗ್ರಾಮೀಣ ಮಹಿಳೆ ಒಬ್ಬ ಯೋಗ್ಯ ಹಾಗು ಸಮರ್ಥ ಕಾರ್ಯಕರ್ತೆಯಾಗಬಲ್ಲಳು, ಎಂಬುದನ್ನು ಸಾತಿನ್ನರು ಸಾಬೀತು ಪಡಿಸಿದ್ದಾರೆ. ಕೆಲವಡೆ ಸುಶಿಕ್ಷಿತ ಮಹಿಳೆಯರಿಗೆ ಹೋಲಿಸಿದಾಗ ಮಹಿಳೆಯರನ್ನು ಸಂಘಟಿಸುವ ಅವರೊಳಗೆ ಚೈತನ್ಯ ತುಂಬುವ ಹಾಗು ಅವರನ್ನು ಮುನ್ನಡೆಸುವ ಕೆಲಸಗಳಲ್ಲಿ ಗ್ರಾಮೀಣ ಮಹಿಳೆಯರು ಹೆಚ್ಚು ಸಫಲರಾಗಿದ್ದಾರೆ.

* ಪಂಚಾಯ್ತಿರಾಜ್ ಹಾಗು ಇತರ ಸಂಸ್ಥೆಗಳಲ್ಲೂ ಮಹಿಳೆಯರು ಮುನ್ನಡೆಯಲು ಸಾತಿನ್ನರು ಶ್ರಮಿಸಿದ್ದಾರೆ.

* ಸಾತಿನ್ನರ ಮೂಲಕ ಗ್ರಾಮೀಣ ಮಹಿಳೆಯರ ಯೋಜನೆಗಳು ಬದಲಾಗಿವೆ. ರೂಢಿಗತ ವಿಚಾರಗಳಿಂದ ದೂರವಾಗಿ, ಸಾಮಾಜಿಕ ಅನಿಷ್ಟಗಳನ್ನು ಅಳಿಸಲು ಸಮಾಜದಲ್ಲಿ ಮಹಿಳಾ ಶೋಷಣೆ, ಅಸಮಾನತೆಯನ್ನು ಕೊನೆಗಾಣಿಸುವ ನಿಟ್ಟಿನಲ್ಲಿ ಸಾತಿನ್ನರು ಮಹತ್ವದ ಕೆಲಸ ಮಾಡಿದ್ದಾರೆ.

* ಹಳ್ಳಿಗಳಲ್ಲಿ ಸಾತಿನ್ನರನ್ನು 'ನ್ಯಾಯ ನೀಡುವವಳು' ಎಂದು ಗುರುತಿಸುತ್ತಾರೆ. ಕೆಲವಡೆ ಮಹಿಳೆಯರೊಂದಿಗೆ, ಪುರುಷರು ನ್ಯಾಯ ಕೇಳಲೆಂದು ಸಾತಿನ್ನರ ಬಳಿ ಬರುತ್ತಾರೆ.

* ಕಾಲದ ಜೊತೆ ಸಾತಿನ್ನರ ಕೆಲಸದ ಜವಾಬ್ದಾರಿಯ ಹೊರೆಯು ಹೆಚ್ಚಿದೆ. ಮಹಿಳಾ ಅಭಿವೃದ್ಧಿ ಕಾರ್ಯಕ್ರಮದ ಆರಂಭದಲ್ಲಿ ಹೊಟ್ಟೆಪಾಡಿಗಾಗಿ ದುಡಿಯುವವರು, ಬಿಡುವಿನ ವೇಳೆಯಲ್ಲಿ ಮಹಿಳಾ ವಿಕಾಸದ ಕೆಲಸವನ್ನು ಮಾಡಲಿ ಎಂಬ ವಿಚಾರವಿತ್ತು. ಆದರೆ ಗ್ರಾಮದಲ್ಲಿ, ಸರ್ಕಾರದಲ್ಲಿ ಸಾತಿನ್ನರು ವಿಶ್ವಾಸ ಗಳಿಸಿಕೊಂಡಂತೆ ಗ್ರಾಮದ ಬೇಡಿಕೆಗಳಿಂದ ಹಾಗು ವಿವಿಧ ಸರಕಾರಿ ವಿಭಾಗಗಳಲ್ಲಿ ಅವರ ಬೇಡಿಕೆ ಹೆಚ್ಚಿತು. ಸಮಯ ಬಿದ್ದರೆ ಹಳ್ಳಿಯ ಹೊರಗೂ ಅವರು ಹೋಗಬೇಕಾಗುತ್ತದೆ. ಇಂತಹ ಪರಿಸ್ಥಿತಿಯಲ್ಲಿ, ಬೇರೆ ಯಾವುದೇ ಆದಾಯವಿಲ್ಲದೆ ಅವರು ಪಡೆಯುವ 250/- ರೂ. ಸಂಭಾವನೆ ಅತಿ ಕಡಿಮೆ.

* ಸಾತಿನ್ನರ ಕೆಲಸ ಕಣ್ಣಿಗೆ ಕಾಣಿಸದ್ದು. ಅವರ ಕೆಲಸವನ್ನು ಲೆಕ್ಕ ಹಾಕಲು ಸಾಧ್ಯವಿಲ್ಲ. ಆದ್ದರಿಂದ ಮೌಲ್ಯಮಾಪನ ವಿಧಾನವೇ ತುರ್ತಾಗಿ ಬದಲಾಗಬೇಕಿದೆ.

* ಮಹಿಳಾ ವಿಕಾಸ ಕಾರ್ಯಕ್ರಮ ಸಫಲವಾಗಲು ಬೇಕಾದ ಪ್ರಕ್ರಿಯೆ, ನಿರ್ಬಂದ ವಾತಾವರಣ, ಎಲ್ಲರ ಸಮಭಾಗಿತ್ವದ ಮಾದರಿಯನ್ನು ಮಾಡಲಾಗಿತ್ತೊ ಅದರಿಂದಲೇ ಮಹಿಳೆ ಸಮರ್ಥಳಾಗಿದ್ದಾಳೆ.

* ಸಾತಿನ್ನರ ಮೂಲಕ ಗ್ರಾಮೀಣ ಮಹಿಳೆಯರು ಮುನ್ನಡೆ ಸಾಧಿಸಿದ್ದಾರೆಂದು ಮಹಿಳಾ ವಿಕಾಸ ಕಾರ್ಯಕ್ರಮವು ಸಾಬೀತು ಪಡಿಸಿದೆ. ಈ ಯಶಸ್ಸನ್ನು ಉಳಿಸಿಕೊಳ್ಳುವುದು ಅತ್ಯವಶ್ಯಕ. ಸಾತಿನ್ನರ ಜಾಗದಲ್ಲಿ ಮಹಿಳಾ ಸಮೂಹವನ್ನು ಪ್ರಾರಂಭಿಸಿದರೆ, ಅವರ ದುಡಿಮೆ ಮಣ್ಣುಪಾಲಾದಂತೆ. ಸಾತಿನ್ನರನ್ನು ಇನ್ನಷ್ಟು ಬಲಗೊಳಿಸುವ ಅವಶ್ಯಕತೆಯಿದೆ. ಅವಸರವಿಲ್ಲದೆ ನಿಧಾನವಾಗಿ ಪ್ರಾಯೋಗಿಕ ರೂಪದಲ್ಲಿ ಮಹಿಳಾ ಸಮೂಹವನ್ನು ಪ್ರಾರಂಭಿಸಬೇಕು.

ವರದಿಯ ನಿರ್ಣಯಗಳು

* ಪ್ರತಿ ಜಿಲ್ಲೆಯಲ್ಲೂ ಸಾತಿನ್ನರ ಸಂಖ್ಯೆಯನ್ನು ಹೆಚ್ಚಿಸುವ ಅವಶ್ಯಕತೆಯಿದೆ. ಪ್ರತಿ ಜಿಲ್ಲೆಗೆ 100 ಜನ ಸಾತಿನ್ನರನ್ನು ನೇಮಿಸಲು ಬಜೆಟ್‌ನಲ್ಲಿ ಅವಕಾಶವಿದೆ. ಆದರೆ ಯಾವ ಜಿಲ್ಲೆಯಲ್ಲೂ 100 ಜನ ಸಾತಿನ್ನರು ಇಲ್ಲ. ಆದ್ದರಿಂದ ಸಂಖ್ಯೆಯನ್ನು ಹೆಚ್ಚಿಸುವುದರಿಂದ ಹೆಚ್ಚಿನ ಲಾಭವಿದೆ.

* ಮಹಿಳಾ ವಿಕಾಸ ಕಾರ್ಯಕ್ರಮವು ಸಾತಿನ್ನರ ಅನೇಕ ವರ್ಷಗಳ ದುಡಿಮೆಯ ಮೂಲಕ ಗ್ರಾಮ ವಿಕಾಸವನ್ನು ಯಶಸ್ವಿಗೊಳಿಸಿದೆ. ಆ ಕಾರಣ ಸಾತಿನ್ನರನ್ನು ಇನ್ನೂ ಹೆಚ್ಚು ಸಶಕ್ತರನ್ನಾಗಿಸುವ ಅವಶ್ಯಕತೆಯಿದೆ.

* ಮಹಿಳಾ ಸಮೂಹವನ್ನು ಪ್ರಾರಂಭಿಸಲು ಬೇರೆಯೇ ವಿಧಾನವನ್ನು ಅಳವಡಿಸಬೇಕು. ಅದನ್ನು ಜಾರಿಗೊಳಿಸುವ ಮೊದಲು ಬೇರೆ ರೀತಿಯ ಶಿಕ್ಷಣದ ಅವಶ್ಯಕತೆ ಇದೆ. ಸಾತಿನ್ನರ ಜಾಗದಲ್ಲಿ ಮಹಿಳಾ ಸಮೂಹವನ್ನು ಅವಸರದಲ್ಲಿ ಪ್ರಾರಂಭಿಸುವುದರಿಂದ ಪ್ರಯೋಜನವಿಲ್ಲ.

* ಸಾತಿನ್ನರ ಅಥ ಪ್ರಚೇರ ಶಿಕ್ಷಣ ಕುರಿತು ಮತ್ತೆ ಗಮನ ಹರಿಸುವುದು ಸೂಕ್ತ. ಅವರನ್ನು ಬಲಗೊಳಿಸುವ, ಸಕ್ರಿಯಗೊಳಿಸುವ ಅವಶ್ಯಕತೆಯಿದೆ. ಕಾರ್ಯಕ್ರಮದ ಮೊದಲ ಹಂತ ಸಫಲವಾಗಿದೆ. ಈ ಹಂತದಲ್ಲಿ ಗ್ರಾಮೀಣ ಮಹಿಳೆಯರು ಹೆಚ್ಚು ಸಮರ್ಥರಾಗಿದ್ದಾರೆ. ಮುಂದುವರೆದ ಹಂತದಲ್ಲಿ ಅಭಿವೃದ್ಧಿ ಕಾರ್ಯದೊಂದಿಗೆ ಅವರನ್ನು ಜೋಡಿಸುವ ಅವಶ್ಯಕತೆಯಿದೆ. ಇದಕ್ಕೆ ಅಗತ್ಯವಾದ ಪ್ರಕ್ರಿಯೆಯತ್ತ ಗಮನಹರಿಸುವುದು ಅವಶ್ಯಕ.

* ಸಾತಿನ್ನರ ಕೆಲಸದ ಹೊರೆ, ಸ್ವರೂಪ, ಕೆಲಸದ ಬಗ್ಗೆ ತೋರುವ ಶ್ರದ್ಧೆ - ಇವೆಲ್ಲವನ್ನು ಮನದಲ್ಲಿಟ್ಟುಕೊಂಡು, ಅವರ ಕೆಲಸವನ್ನು ಗುರುತಿಸಿ ಸ್ವೀಕರಿಸುವುದು ಅವಶ್ಯಕ. ಇದಕ್ಕಾಗಿ ಅವರ ಸಂಬಳವನ್ನು ಹೆಚ್ಚಿಸುವುದು ಅತ್ಯವಶ್ಯಕ. ಈ ರೀತಿ ಮಾಡುವುದರಿಂದ, ಮಹಿಳೆಯರ ಅಪ್ರತ್ಯಕ್ಷಕ ದುಡಿಮೆಗೆ ಸರ್ಕಾರ ಮನ್ನಣೆ ನೀಡಿದಂತಾಗುತ್ತದೆ.

ವರದಿಯ ಪ್ರಾರಂಭದಲ್ಲಿ ಮಹಿಳಾ ಆಯೋಗದ ಅಧ್ಯಕ್ಷೆ ಶ್ರೀಮತಿ ಮೋಹಿನಿಗಿರಿ ಹಾಗು ಆಯೋಗದ ಸದಸ್ಯೆ ಶ್ರೀಮತಿ ಪದ್ಮ ಸೇಠ್ ಅವರ ಪತ್ರಗಳನ್ನು ಪ್ರಕಟಿಸಲಾಗಿದೆ. ಪತ್ರದಲ್ಲಿ ಮಹಿಳಾ ವಿಕಾಸ ಕಾರ್ಯಕ್ರಮದಲ್ಲಿ ಸಾತಿನ್ನರನ್ನು ಸಮರ್ಥ, ಸಫಲ ಕಾರ್ಯಕರ್ತೆಯರೆಂದು ಪರಿಗಣಿಸಿ ಅವರಿಗೆ ದೊರಕಬೇಕಾಗಿರುವ ಸೌಲಭ್ಯಗಳನ್ನು ಸವಿಸ್ತಾರವಾಗಿ ಹೇಳಲಾಗಿದೆ. ತಾವು ನಡೆಸಿದ ತನಿಖೆಯ ಮೂಲಕ ಸಾತಿನ್ನರು ಹಳ್ಳಿಯವರ ವಿಶ್ವಾಸಕ್ಕೆ ಪಾತ್ರರಾಗಿದ್ದಾರೆಂಬುದು ಸಾಬೀತಾಗಿರುವುದನ್ನು ತಿಳಿಸಲಾಗಿದೆ. ಉತ್ತಮ ಕೆಲಸ ಮಾಡುತ್ತಿರುವ ಸಾತಿನ್ನರ ಮೂಲ ಅವಶ್ಯಕತೆಗಳಾದ ಊಟ, ಬಟ್ಟೆ, ವಸತಿ ಹಾಗು ಕೌಟುಂಬಿಕ ಜವಾಬ್ದಾರಿಗಳು, ಮಕ್ಕಳ ಶಿಕ್ಷಣ, ಆರೋಗ್ಯದ ಸವಲತ್ತುಗಳನ್ನು ಕಡೆಗಣಿಸಬಾರದೆಂದು ತಿಳಿಸಲಾಗಿದೆ. ಸಾತಿನ್ನರ ದುಡಿಮೆ, ಶ್ರದ್ಧೆಯನ್ನು ಪ್ರಶಂಶಿಸಿ ಅವರನ್ನು ಕೆಲಸದಿಂದ ತೆಗೆದು ಹಾಕಬಾರದೆಂದು ಸ್ಪಷ್ಟವಾಗಿ ಹೇಳಲಾಗಿದೆ. ಅಲ್ಲದೆ ಸಾತಿನ್ನರ ಸಂಬಳವನ್ನು ಹೆಚ್ಚಿಸಿ ಅವರ ರಕ್ಷಣೆಯ ಗ್ಯಾರಂಟಿ ನೀಡಬೇಕೆಂದು ಸರ್ಕಾರಕ್ಕೆ ಮನವಿ ಮಾಡಿದೆ.

[1984ರಲ್ಲಿ, ರಾಜಾಸ್ಥಾನದಲ್ಲಿ ಮಹಿಳಾ ಅಭಿವೃದ್ಧಿ ಕಾರ್ಯಕ್ರಮವನ್ನು ಪ್ರಾರಂಭಿಸಲಾಯಿತು. ಮಹಿಳೆಯರನ್ನು ಸಶಕ್ತಗೊಳಿಸಿ ಅವರನ್ನು ಅಭಿವೃದ್ಧಿಯ ಮುಖ್ಯವಾಹಿನಿಯಲ್ಲಿ ಒಳಗೊಳ್ಳುವುದೆ ಕಾರ್ಯಕ್ರಮದ ಮುಖ್ಯ ಉದ್ದೇಶವಾಗಿತ್ತು. ಗ್ರಾಮಮಟ್ಟದಲ್ಲಿ ಕೆಲಸ ಮಾಡುವ ಮಹಿಳೆಯರನ್ನು ಸಾತಿನ್ನರೆಂದು ಕರೆಯುತ್ತಾರೆ. ಈ ಸಾತಿನ್ನ ಇಡಿ ಕಾರ್ಯಕ್ರಮದ ಬೆನ್ನೆಲುಬು.]

ಕೃಪೆ : ಸಾತಿನ್ನ ಯೂನಿಯನ್‌ನ ಕರಪತ್ರ ಹಾಗು
ಟೈಂಸ್ ಆಫ್ ಇಂಡಿಯಾ

# ಸರ್ಕಾರಕ್ಕೆ ನಮ್ಮ ಪ್ರಯತ್ನವನ್ನು ನಿಲ್ಲಿಸಲು ಸಾಧ್ಯವಿಲ್ಲ!

ಮಹಿಳಾ ಅಭಿವೃದ್ಧಿ ಕಾರ್ಯಕ್ರಮದಡಿ ಸಾತಿನ್ನಳಾಗಿ ಕೆಲಸ ಮಾಡುತ್ತಿದ್ದ ಭವರಿಬಾಯಿಯು, ಸಾತಿನ್ ಯೋಜನೆಯನ್ನು ಕೈ ಬಿಡಬೇಕೆಂಬ ಸರ್ಕಾರದ ನಿಲುವಿಗೆ ಈ ರೀತಿ ಪ್ರತಿಕ್ರಿಯಿಸಿದ್ದಾಳೆ........

ಮಹಿಳಾ ಅಭಿವೃದ್ಧಿ ಕಾರ್ಯಕ್ರಮದಲ್ಲಿ ಸಾತಿನ್ನರ ಸೇವೆಯನ್ನು ಕೈಬಿಡಬೇಕೆಂಬ ಸರ್ಕಾರದ ನಿಲುವು ನನ್ನನ್ನು ನಿರಾಶೆಗೊಳಿಸಿದೆ ಆದರೆ ಸೋಲಿನ ಭಾವನೆ ನನ್ನಲ್ಲಿ ಇಲ್ಲ. ಈ ರೀತಿ ತೆಗೆಯುವ ಉದ್ದೇಶವಿದ್ದಿದ್ದರೆ ಕಾರ್ಯಕ್ರಮವನ್ನು ಪ್ರಾರಂಭಿಸಿದ್ದಾದರು ಏಕೆ? ಎಂಬ ಪ್ರಶ್ನೆ ಆಕೆಯದು.

ರಾಜಾಸ್ಥಾನದ 21 ಜಿಲ್ಲೆಗಳಲ್ಲಿ 600 ಜನ ಸಾತಿನ್ನರು ಕೆಲಸ ಮಾಡುತ್ತಿದ್ದಾರೆ. ಗರ್ಭನಿರೋಧಕಗಳ ವಿಸ್ತರಣೆ, ಹೆಣ್ಣು ಮಕ್ಕಳನ್ನು ಶಾಲೆಗೆ ಕಳಿಸಬೇಕೆಂದು ತಾಯಿ-ತಂದೆಯರನ್ನು ಒಲಿಸುವುದು ಇತ್ಯಾದಿ ಅನೇಕ ಕೆಲಸಗಳನ್ನು ಸಾತಿನ್ನರು ಮಾಡುತ್ತಾರೆ. ಸರ್ಕಾರವು ಕೊಡುತ್ತಿದ್ದುದು ತಿಂಗಳಿಗೆ ಕೇವಲ 250/-ರೂ. ಗೌರವ ಧನ. ಹಣವನ್ನು ಹೆಚ್ಚಿಸಬೇಕೆಂದು ಕೇಳಿದಕ್ಕೆ ಕಾರ್ಯಕ್ರಮವನ್ನು ಮುಚ್ಚಲು ನೋಡುತ್ತಿರಬಹುದೆಂಬ ಅನುಮಾನ ಆಕೆಗೆ.

ಮಹಿಳೆಯರನ್ನು ಸಶಕ್ತಗೊಳಿಸಿ ಅವರನ್ನು ಮುಖ್ಯವಾಹಿನಿಯ ಅಭಿವೃದ್ಧಿಯ ಕಾರ್ಯಕ್ರಮಗಳಲ್ಲಿ ಸಕ್ರೀಯ ಗೊಳಿಸುವುದೆ ಕಾರ್ಯಕ್ರಮದ ಮುಖ್ಯ ಉದ್ದೇಶವಾಗಿತ್ತು. ಈ ನಿಟ್ಟಿನಲ್ಲಿ ಸಾತಿನ್ನರು ಯಶಸ್ವಿಯಾಗಿ ದುಡಿದಿದ್ದಾರೆ. ಸಾಮಾನ್ಯವಾಗಿ ಹಿಂದುಳಿದ ಜಾತಿಗಳಿಗೆ ಸೇರಿದವರಾದ ಸಾತಿನ್ನರು ಹಳ್ಳಿಗಳಲ್ಲಿ ಕೆಲಸ ಮಾಡುವಾಗ ಅಲ್ಲಿನ ಪಟ್ಟಭದ್ರ ಹಿತಾಸಕ್ತಿಗಳೊಂದಿಗೆ ನೇರ ವಿರೋಧವನ್ನೆದುರಿಸಬೇಕಾಗುತ್ತವೆ. ಈ ವಿಷಯವನ್ನು ಸರ್ಕಾರವು ಊಹಿಸಲಿಲ್ಲ. ಇದಕ್ಕೆ ಭವರಿಯದೇ ಪ್ರತ್ಯಕ್ಷ ಉದಾಹರಣೆ. ಬಾಲ್ಯವಿವಾಹವನ್ನು ತಡೆದ ಕಾರಣಕ್ಕಾಗಿ ಆಕೆಯ ಮೇಲೆ ಹಳ್ಳಿಯ ಬಲಿಷ್ಠ ಕೋಮಿನ ಗಂಡಸರು ಸಾಮೂಹಿಕ ಅತ್ಯಾಚಾರವೆಸಗಿದರು. ಘಟನೆ ನಡೆದು 4 ವರ್ಷವಾದರೂ ಆಪಾದಿತರ ಮೇಲೆ ಯಾವ ಕ್ರಮವನ್ನು ಜರುಗಿಸಿಲ್ಲ. ಬದಲಾಗಿ ಜೈಪುರದ ಸೆಶೆನ್ಸ್ ಕೋರ್ಟ್ ಆಪಾದಿತರನ್ನು ಖುಲಾಸೆಗೊಳಿಸಿದೆ. ಹಾಗಾಗಿ ಆಕೆ ಹೈಕೋರ್ಟಿನ ಮೊರೆ ಹೋಗಿದ್ದಾಳೆ. ಈವರೆಗೆ ವಿಚಾರಣೆಗೆ ಬಂದಿಲ್ಲ. ಆಮೆ ವೇಗದ ನ್ಯಾಯಾಲಯದ ವಿಧಾನವು ಆಕೆಗೆ ಕಹಿಯನ್ನುಂಟು ಮಾಡಿದೆ.

ರಾಜಾಸ್ಥಾನದಲ್ಲಿ ಅತ್ಯಾಚಾರವನ್ನು ಒಂದು ಅಪರಾಧವನ್ನಾಗಿ ಪರಿಗಣಿಸುವುದೇ ಇಲ್ಲ. ಆಪಾದಿತರು ಅಪರಾಧವೆಸಗಿದುದಲ್ಲದೆ ಜನರು ನನ್ನ ಮೇಲೆ ಕೆಟ್ಟ ಅಭಿಪ್ರಾಯ ತಾಳುವಂತೆ ಮಾಡಿದರು. ಈಗಲೂ ಕೆಟ್ಟ ಅಭಿಪ್ರಾಯ ಮೂಡಿಸುವ ಯಾವ ಅವಕಾಶವನ್ನೂ ಅವರು ಬಿಡುವುದಿಲ್ಲ. ಅದೃಷ್ಟಾವಶತ್ ಹಳ್ಳಿಯ ಹೆಂಗಸರು ನಿಧಾನವಾಗಿಯಾದರೂ ನನ್ನ ನಿಲುವತ್ತ ಮನ ತಿರುಗಿಸುತ್ತಿದ್ದಾರೆ. ತಮ್ಮ ಹೆಣ್ಣು ಮಕ್ಕಳು ಶಾಲೆಗೆ ಹೋಗಲೆಂದು ಬಯಸುತ್ತಾರೆ. ಹೆಚ್ಚು ಮಕ್ಕಳ ಹೊರೆಯಿಂದ ದೂರವಾಗಲು ಗರ್ಭ ನಿರೋಧಕಗಳ ಬಗ್ಗೆ ಆಸಕ್ತಿ ತೋರುತ್ತಿದ್ದಾರೆ. ಈ ರೀತಿಯ ಬದಲಾವಣೆಯ ಹಿಂದೆ ಸಾತಿನ ಶ್ರಮ ಬಹಳಷ್ಟಿದೆ. ಆದರೆ ಕಾರ್ಯಕ್ರಮವನ್ನು ಸರ್ಕಾರ ನಿಲ್ಲಿಸಲು ಯೋಚಿಸುತ್ತಿರುವುದು ವಿಷಾದನೀಯ! ಎನ್ನುವ ಅಭಿಪ್ರಾಯ ಭವರಿಯದು.

ಎಲ್ಲಾ ನಿರಾಶೆಗಳೊಂದಿಗೂ ಭವರಿ ತನ್ನನ್ನು ಸಂಪೂರ್ಣವಾಗಿ ಮಹಿಳಾ ಚಳುವಳಿಯೊಂದಿಗೆ ಸಂಪೂರ್ಣವಾಗಿ ಗುರುತಿಸಿಕೊಳ್ಳುತ್ತಾರೆ. ಸರ್ಕಾರದ ನಿಲುವನ್ನು ವಿರೋಧಿಸಿ ನಡೆದ ಪ್ರತಿಭಟನಾ ಆಂದೋಲನದಲ್ಲಿ ಆಕೆ ಸಕ್ರಿಯವಾಗಿ ಪಾಲ್ಗೊಂಡಿದ್ದಳು. ಮಹಿಳಾ ಕಾರ್ಯಕರ್ತೆಯರ ಮೀಟಿಂಗ್‌ನಲ್ಲಿ ಭಾಗವಹಿಸಲು, ಹೆಚ್ಚು ಕಡಿಮೆ ವಾರಕ್ಕೊಮ್ಮೆ 40 ಕಿ.ಮೀ. ದೂರದ ಜೈಪುರಕ್ಕೆ ಹೋಗುತ್ತಾಳೆ, ತನ್ನ ಹಳ್ಳಿಯ ಸಮೀಪದ ಬಾಸಿ ಜಿಲ್ಲೆಯಲ್ಲಿ ಅತ್ಯಾಚಾರಕ್ಕೊಳಗಾದ 20 ವರ್ಷದ ಮಹಿಳೆಗೆ ಸಂಪೂರ್ಣ ಬೆಂಬಲ ನೀಡಿದ್ದಾಳೆ. ಆಕೆಯಿಂದಾಗಿಯೆ ಸ್ಥಳೀಯ ಪೋಲೀಸ್ ಠಾಣೆಯಲ್ಲಿ ಮೊಕದ್ದಮೆ ದಾಖಲಾಗಿದ್ದು ಅಲ್ಲದೆ ಉಚಿತ ರೀತಿಯಲ್ಲಿ ವಿಚಾರಣೆಯನ್ನು ನಡೆಸುವಂತೆ ಮಾಡಲು ಹೋರಾಡುತ್ತಿದ್ದಾಳೆ. ಮಹಿಳೆಯರ ಮೇಲೆ ಹೆಚ್ಚುತ್ತಿರುವ ಅನ್ಯಾಯಗಳನ್ನು ಎದುರಿಸುವುದನ್ನು ನಮ್ಮ ಆಂದೋಲನವುಎಂದೂ ನಿಲ್ಲಿಸುವುದಿಲ್ಲ ಎಂಬ ನಿಲುವು ಭವರಿಯದು. ಹಿಂದುಳಿದ ಜಾತಿಯ ಹೆಣ್ಣು ಮಕ್ಕಳು ಶಾಲೆಗೆ ಹೋಗುವುದೇ ಕಷ್ಟ. ಆ ಮಕ್ಕಳ ಬಗ್ಗೆ ಇರುವ ಕಾಳಜಿಯಿಂದಾಗಿ ಭವರಿ ತನ್ನ ಮಗಳೊಂದಿಗೆ ಸೇರಿ ಮನೆಯ ಸಮೀಪವೆ ಅನೌಪಚಾರಿಕ ತರಗತಿಗಳನ್ನು ನಡೆಸುತ್ತಿದ್ದಾಳೆ. ಎಂಟು ವರ್ಷಕ್ಕಿಂತ ಕಡಿಮೆ ವಯಸ್ಸಿನ 25 ಹೆಣ್ಣು ಮಕ್ಕಳು ತರಗತಿಗೆ ಬರುತ್ತಿದ್ದಾರೆ. ಇದು ಆಕೆಯ ಬದ್ಧತೆಗೊಂದು ನಿದರ್ಶನ. ಮಹಿಳೆಯರ ಉದ್ಧಾರಕ್ಕಾಗಿ ನಾವು ಸಾತಿನ್ನರು ಬದ್ಧರು. ಜನರೊಂದಿಗೆ ಕೆಲಸ ಮಾಡಲು ನಮಗೆ ತರಬೇತಿ ನೀಡಲಾಗಿದೆ. ಸರ್ಕಾರದ ನಿರ್ಧಾರವೇನೇ ಆಗಿರಲಿ ನಾವು ಕೆಲಸ ಮುಂದುವರಿಸುತ್ತೇವೆ ಎಂಬುದು ಆಕೆಯ ಅಚಲ ನಿರ್ಧಾರ.

*ಕೃಪೆ : ಟೈಮ್ಸ್ ಆಫ್ ಇಂಡಿಯಾ, ದಿ ಹಿಂದು, ಸಾತಿನ್ ಯೂನಿಯನ್ ಕರಪತ್ರ*

# ಸಾತಿನ್ನರ ಹೋರಾಟಕ್ಕೆ ಬೆಂಬಲ ನೀಡಿ

*ಸಾತಿನ್ನರ ಹೋರಾಟಕ್ಕೆ ಸಂಬಂಧಪಟ್ಟ ಲೇಖನವು ಮುದ್ರಣಕ್ಕೆ ಹೋಗುತ್ತಿರುವ ಸಂದರ್ಭದಲ್ಲಿ, ಅಲ್ಲಿ ಸಾತಿನ್ನರು ತಮ್ಮ ಹೋರಾಟವನ್ನು ಇನ್ನೂ ತೀವ್ರಗೊಳಿಸಿದ್ದಾರೆ. ಏಪ್ರಿಲ್ 3 ರಂದು ಸಾರ್ವಜನಿಕ ಸಭೆ ಹಾಗು ಧರಣಿ ನಡೆಸುವ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದಾರೆ. ಆ ಕಾರ್ಯಕ್ರಮಕ್ಕೆ ಸಂಬಂಧಪಟ್ಟ ಕರಪತ್ರವನ್ನು ಮಹಿಳಾ ವಿಕಾಸ ಅಭಿಕರಣ್ ಸಾತಿನ್ ಕರ್ಮಚಾರಿ ಸಂಘದವರು ನಮಗೆ ಕಳಿಸಿದ್ದಾರೆ. ಕರಪತ್ರದ ಮೂಲಕ ಹೋರಾಟಕ್ಕೆ ಬೆಂಬಲ ಕೋರಿದ್ದಾರೆ. ಕರಪತ್ರದ ಅನುವಾದವನ್ನು ಮಾನಸ ಓದುಗರಿಗಾಗಿ ಪ್ರಕಟಿಸುತ್ತಿದ್ದೇವೆ*

**ಮಹಿಳಾ ವಿಕಾಸ್ ಅಭಿಕರಣ್ ಸಾತಿನ್ನ ಕರ್ಮಚಾರಿ ಸಂಘ (ನೋಂದಣಿ ಸಂಖ್ಯೆ : 126/93)**

**ಸಾರ್ವಜನಿಕ ಸಭೆ ಮತ್ತು ಧರಣ : 3 ಏಪ್ರಿಲ್**

ಕಳೆದ ದಶಕದಲ್ಲಿ ರಾಜಾಸ್ಥಾನದ ಗ್ರಾಮೀಣ ಪ್ರದೇಶಗಳು ಗಮನಾರ್ಹ ಮಹಿಳಾ ಸಶಕ್ತತೆಯನ್ನು ಕಂಡಿದೆ. ರಾಜಾಸ್ಥಾನದಲ್ಲಿ ಮಹಿಳಾ ಅಭಿವೃದ್ಧಿ ಕಾರ್ಯಕ್ರಮದ ಕೆಳಹಂತದಲ್ಲಿ ಕೆಲಸ ಮಾಡುತ್ತಿರುವ ಸಾತಿನ್ನರು, ಗ್ರಾಮೀಣ ಮಹಿಳೆಯರು ರಾಜಕೀಯ ಸಾಮಾಜಿಕ ಹಾಗು ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡುವಲ್ಲಿ, ಪರಿಣಾಮಕಾರಿಯಾಗಿ ದುಡಿದಿದ್ದಾರೆ. ಜಾತಿ ಪದ್ಧತಿ, ಊಳಿಗಮಾನ ಪದ್ಧತಿಯಲ್ಲಿ ಮುಳುಗಿರುವ, ಹಿಂದುಳಿದ ರಾಜ್ಯವಾದ ರಾಜಾಸ್ಥಾನದಂತ ಜಾಗದಲ್ಲಿ ಸಾಮಾಜಿಕ ಬದಲಾವಣೆ ತರುವಂತಹ ಕೆಲಸ ಸುಲಭ ಸಾಧ್ಯವಲ್ಲ. ಸಾತಿನ್ನರ ಪ್ರಯತ್ನವು ಪ್ರತಿರೋಧಗಳಿಂದ ಹೊರತಾಗಿರಲಿಲ್ಲ. ಅಪಾಯಕಾರಿಯಾದ ಪ್ರತಿರೋಧವನ್ನೆದುರಿಸಿಯೂ, ಗ್ರಾಮೀಣ ಮಹಿಳೆಯರೊಡಗೂಡಿ ಗಮನಾರ್ಹವಾಗಿ ಕೆಲಸ ಮಾಡಿದ್ದಾರೆ. ಅಲ್ಲದೆ ಪ್ರತಿರೋಧವನ್ನು ಧೈರ್ಯದಿಂದ ಎದುರಿಸಿದ್ದಾರೆ.

ಕಳೆದ 12 ವರ್ಷಗಳಿಂದ, ಬದ್ಧತೆಯಿಂದ, ಯಶಸ್ವಿಯಾಗಿ ತಮ್ಮ ಕರ್ತವ್ಯವನ್ನು ನಿರ್ವಹಿಸಿದ್ದರೂ ಸಾತಿನ್ನರು ಶೋಷಣೆಗೆ ಗುರಿಯಾಗಿದ್ದಾರೆ. ಸ್ವಯಂಸೇವಕಿ ಎಂಬ ಹೆಸರಿನಲ್ಲಿ ಆಕೆಗೆ ಸಿಗುವ ಗೌರವ ಧನ ತಿಂಗಳಿಗೆ ಕೇವಲ ರೂ. 250/-. ಈ ಹಣಕ್ಕೆ ಅವರು ಮಾಡುವುದು ಸರ್ಕಾರ ಸೂಚಿಸಿರುವ 64 ಕಾರ್ಯಗಳನ್ನು! ಸೇವಾ ನಿಯಮಗಳಾಗಲಿ, ಉದ್ಯೋಗ ಭದ್ರತೆಯಾಗಲಿ ಅವರಿಗಿಲ್ಲ. ಕಳೆದ 4 ವರ್ಷಗಳಿಂದಲೂ ಸಾತಿನ್ನರು ತಮ್ಮ ಬೇಡಿಕೆಗಳಿಗಾಗಿ, ಸಾತಿನ್ನ ಕರ್ಮಚಾರಿ ಸಂಘದಡಿಯಲ್ಲಿ ಹೋರಾಡುತ್ತಿದ್ದಾರೆ. ಮಹಿಳಾ ಅಭಿವೃದ್ಧಿ ಯೋಜನೆಯಡಿ ಮಹಿಳೆಯರ ದುಡಿಮೆಯ ಶೋಷಣೆಯನ್ನು, ದುಡಿಮೆಯ ಅಮೌಲ್ಯಿಕರಣವನ್ನು ವಿರೋಧಿಸುತ್ತ ಬಂದಿದ್ದಾರೆ. ಇಂದು ಸಾತಿನ್ನರು ಹಾಗು ಗ್ರಾಮದ ಮಹಿಳೆಯರು, ಮಹಿಳಾ ವಿರೋಧಿ ಸಾಮಾಜಿಕ -ಆರ್ಥಿಕ ಹಾಗು ರಾಜಕೀಯ ಪ್ರಕ್ರಿಯೆಯನ್ನು ವಿರೋಧಿಸುತ್ತಿರುವ ಸಂದರ್ಭದಲ್ಲಿ ರಾಜಾಸ್ಥಾನ ಸರ್ಕಾರವು ಮಹಿಳಾ ಅಭಿವೃದ್ಧಿ ಯೋಜನೆಯಲ್ಲಿನ ಸಾತಿನ್ನ ಮಾದರಿಯನ್ನೆ ಕೈ ಬಿಡುವ ಸೂಚನೆಗಳನ್ನು ನೀಡುತ್ತಿದೆ. ಕಳೆದ 5 ವರ್ಷಗಳಿಂದ ಯಾವ ಹೊಸ ಸಾತಿನ್ನರನ್ನು ನೇಮಕ ಮಾಡಿಲ್ಲ. ಒಟ್ಟು 2,000 ಸಾತಿನ್ನರ ಹುದ್ದೆಗಳಲ್ಲಿ 2/3 ಭಾಗ ಖಾಲಿ ಉಳಿದಿದೆ.

**ನ್ಯಾಯಕ್ಕಾಗಿ ತಮ್ಮ ಹೋರಾಟವನ್ನು ಮುಂದುವರೆಸಿರುವ ಸಾತಿನ್ನರು ಈ ಕೆಳಗಿನ ಬೇಡಿಕೆಗಳನ್ನು ಮುಂದಿಟ್ಟಿದ್ದಾರೆ**

- ಸಾತಿನ್ನ ಮಾದರಿಯು ಹೇಗಿದೆಯೊ ಹಾಗೆಯೇ ಮುಂದುವರೆಯಬೇಕು. ಹಾಗು ಕಾರ್ಯಕ್ರಮವು ವಿಸ್ತಾರಗೊಳ್ಳಬೇಕು. ಈಗಾಗಲೇ ಮಂಜೂರಾಗಿ, ಖಾಲಿ ಉಳಿದಿರುವ ಹುದ್ದೆಗಳನ್ನು ಭರ್ತಿ ಮಾಡಬೇಕು.
- ಸಾತಿನ್ನರಿಗೆ ನ್ಯಾಯಯುತವಾದ ಸಂಬಳ ಕಡೇ ಪಕ್ಷ ಕನಿಷ್ಠ ವೇತನವನ್ನಾದರೂ ನೀಡಬೇಕು. ಅವರಿಗೆ ಸಮರ್ಪಕ ಸ್ಥಾನವನ್ನು ನೀಡಬೇಕು.
- ಇಲಾಖೆಯ ಹಂತದಲ್ಲಿ ಸಾತಿನ್ನರ ಮೇಲಾಗುತ್ತಿರುವ ಶೋಷಣೆಯನ್ನು ತತ್‌ಕ್ಷಣವೇ ನಿಲ್ಲಿಸಬೇಕು.
- ಅಡ್‌ಹಾಕ್ ಆಧಾರದ ಮೇಲೆ ತೆಗೆದುಹಾಕಿರುವ ಸಾತಿನ್ನರನ್ನು ಮರುನೇಮಕ ಮಾಡಿಕೊಳ್ಳಬೇಕು.
- ಸಾತಿನ್ನರ ಜವಾಬ್ದಾರಿಯ ಹಿಂದೆ ಪರೋಕ್ಷವಾಗಿರುವ ಸಶಕ್ತತೆಯ ಅಂಶವನ್ನು ಕೆಲಸವೆಂದು ಗುರುತಿಸಬೇಕು.
- ಗ್ರಾಮೀಣ ವಿಷಯಗಳಿಗೆ ಪ್ರಾಧಾನ್ಯತೆ ನೀಡಬೇಕು ಮತ್ತು ಎಲ್ಲಾ ಅವಶ್ಯಕ ಬೆಂಬಲವನ್ನು ಇಲಾಖೆಯು ನೀಡಬೇಕು.
- ಮುಂದೆ ಮಹಿಳಾ ಅಭಿವೃದ್ಧಿ ಕಾರ್ಯಕ್ರಮವನ್ನು ನಿರ್ಧರಿಸುವ ಪ್ರಕ್ರಿಯೆಯು ಪಾರದರ್ಶಕವಾಗಿರಬೇಕು ಹಾಗು ಸಾತಿನ್ನರನ್ನು ಒಳಗೊಳ್ಳಬೇಕು.

***ಸಾತಿನ್ನರ ಹೋರಾಟಕ್ಕೆ ಈ ಮೂಲಕ ಬೆಂಬಲ ನೀಡಿ***

- ಏಪ್ರಿಲ್ 3, 97ರಂದು ಬಾಡಿ ಚೌಪಡ್ (ಜೈಪುರ)ನಲ್ಲಿ ನಡೆಯಲಿರುವ ಸಾರ್ವಜನಿಕ ಸಭೆ ಹಾಗು ಧರಣಿಯಲ್ಲಿ ಭಾಗವಹಿಸುವ ಮೂಲಕ.
- ಧರಣಿ ನಡೆಯುವ ಸಂದರ್ಭದಲ್ಲಿ ಪತ್ರ ಹಾಗು ತಂತಿ ಕಳಿಸುವ ಮೂಲಕ ವಿಳಾಸ - No. 76, Shantiniketan Colony, Kisan Marg, Barkat nagar, Jaipur, Tel & Fax : 0141-591408.
- ರಾಜಾಸ್ಥಾನದ ಮುಖ್ಯಮಂತ್ರಿಗೆ ಹಾಗು ಮಹಿಳೆ ಹಾಗು ಶಿಶುಕಲ್ಯಾಣ ಇಲಾಖೆ ಮಂತ್ರಿಗೆ, ಸಾತಿನ್ನರ ಬೇಡಿಕೆಗಳನ್ನು ಈಡೇರಿಸುವಂತೆ ಒತ್ತಾಯಿಸಿ ಪತ್ರ ಬರೆಯುವ ಮೂಲಕ.
- ಕೆಳಗೆ ಸೂಚಿಸಿರುವ ವಿಳಾಸಕ್ಕೆ ಸಂಘದ ಹೆಸರಿನಲ್ಲಿ ಆರ್ಥಿಕ ನೆರವು ನೀಡುವ ಮೂಲಕ

*ಸೂಚನೆ : ಧರಣಿಯು 3 ನೇ ತಾರೀಖಿನಿಂದ 7 ನೇ ತಾರೀಖಿನವರೆಗೂ ಮುಂದುವರೆಯುತ್ತದೆ.*

**ಕೇಸರಬಾಯಿ** (Kesara Bai), ಅಧ್ಯಕ್ಷರು,

Mahila Vikas Abhikaran Sathin - Karmachari Sangha, No. 408/2, Anasagar Ghati, Ganj, Ajmer - 305001

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವತಂತ್ರ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 40 ರೂ.**

*ಸಂ. ಮಂಡಳಿ*

REGD NO. KRNA 271

BOOK-POST
PRINTED MATTER

ವಿಳಾಸ :
**ಮಾನಸ**
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067